ಸಂಪುಟ ೫ ಸಂಚಿಕೆ ೩

'ಅಚಲ' ಪತ್ರಿಕೆಯನ್ನು ಪಡೆಯಬಯಸುವವರು ದಯವಿಟ್ಟು ಕೆಳಗಿನ ವಿಳಾಸಕ್ಕೆ ಹತ್ತು ರೂಪಾಯಿಗಳನ್ನು ಎಂ.ಓ./ಡ್ರಾಫ್ಟ್ ಮೂಲಕ ಕಳುಹಿಸಿ. ಕೂಪನ್‌ನಲ್ಲಿ ತಮ್ಮ ವಿಳಾಸವನ್ನು ಸ್ಪಷ್ಟವಾಗಿ ಬರೆಯಬೇಕು. ಚಂದಾದಾರರು ತಮ್ಮ ವಿಳಾಸ ಬದಲಾದರೆ ಕೂಡಲೇ ಕಾರ್ಡಿನಲ್ಲಿ ಬರೆದು ತಿಳಿಸಬೇಕು.

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ
26, 1ನೇ ಮೈನ್, ವೈಯಾಳಿಕಾವಲ್
ಬೆಂಗಳೂರು–560 003.

---

**ಸಂಪಾದಕ ಮಂಡಳಿ :**

ಎನ್. ಗಾಯತ್ರಿ, ದೇವಿ, ಭಾರತಿ ಕಿನ್ನಾಳ್, ನೇಮಿಚಂದ್ರ

ಕಲೆ : ವೆಂಕಟಾಚಲಪತಿ

ಪ್ರಸಾರ : ಎನ್. ಶಾಂತಾ

---

**ಚಂದಾ ವಿವರ**

| | | | |
|---|---|---|---|
| ವಾರ್ಷಿಕ ಚಂದಾ | : | ರೂ | 10–00 |
| ಬಿಡಿ ಪ್ರತಿ | : | ರೂ | 1–50 |
| ವಿಶೇಷ ಪ್ರತಿ | : | ರೂ | 2–00 |
| ಆಜೀವ ಚಂದಾ | : | ರೂ | 100–00 |

---

Printed at PRINTSWELL, 78, 2nd Main Road
Nagappa Block, Srirampuram, Bangalore–21 &
Published by Dr. G. Ramakrishna on behalf of
Jagruthi Mahila Adhyayana Kendra
26, I Main, Vyalikaval, Bangalore–560 003.

Editor : N. GAYATRI

ಬದಲಾದ ಹೆಸರುಗಳೊಂದಿಗೆ ಈ ಪತ್ರಿಕೆ ನಾಲ್ಕನೇ ವರ್ಷವನ್ನು ಯಶಸ್ವಿಯಾಗಿ ಮುಗಿಸಿ ಐದನೇ ವರ್ಷಕ್ಕೆ ಕಾಲಿಡುತ್ತಿದೆ. ಈ ಪತ್ರಿಕೆಯನ್ನು ಹೀಗೆ ಬೆಳೆಸಿಕೊಂಡು ಹೋಗಲು, ಇನ್ನಷ್ಟು ಸತ್ವಯುತವಾಗಿಸಲು ನಿಮ್ಮೆಲ್ಲರ ಸಹಕಾರ ಅಗತ್ಯ.

---

ಪುಸ್ತಕ ವಿಮರ್ಶೆಗಾಗಿ ಪುಸ್ತಕ ಕಳುಹಿಸುವವರು ದಯವಿಟ್ಟು ಎರಡು ಪ್ರತಿಗಳನ್ನು ಕಳುಹಿಸಬೇಕಾಗಿ ವಿನಂತಿ.

---



---

## ಒಳಗೇನಿದೆ....

# ಸಮಾಜಸೇವೆಯ ಅತ್ಯುತ್ತಮ ನಿದರ್ಶನ

ಧಾರವಾಡದ 'ವನಿತಾ ಸಮಾಜ' ಹಾಗೂ ಅದರ ಸಂಸ್ಥಾಪಕಿ ಶ್ರೀಮತಿ ಭಾಗೀರಥಿಬಾಯಿ ಪುರಾಣಿಕ, ಅವರ ಹೆಸರು ಮತ್ತು ಸಾಧನೆಗಳು ಇಂದಿನ ತಲೆಮಾರಿನ ಹೆಚ್ಚಿನ ಜನಕ್ಕೆ ಅರಿವಿಲ್ಲದಿರ ಬಹುದು. ಆದರೆ ಸುಮಾರು ಅರವತ್ತು ವರ್ಷಗಳ ಹಿಂದೆ 'ವನಿತಾ ಸಮಾಜ'ವನ್ನು ಧಾರವಾಡದಲ್ಲಿ ಕಟ್ಟಿ ಬೆಳೆಸಿದ ಶ್ರೀಮತಿ ಭಾಗೀರಥಿಬಾಯಿ ಪುರಾಣಿಕ ಅವರು ಜನಿಸಿ ಇಂದಿಗೆ ನೂರು ವರ್ಷಗಳಾದವು. 'ಸಮಾಜ ಸೇವೆ'ಗೆ ಅತ್ಯುತ್ತಮ ನಿದರ್ಶನವಾದ ಅವರು ಆ ಶಬ್ದಕ್ಕೆ ಅತಿ ಹೆಚ್ಚಿನ ಗೌರವ ದೊರಕಿಸಿ ಕೊಟ್ಟಿದ್ದಾರೆ.

'ಹಿಟ್ಟು ಅವಲಕ್ಕಿಗಳ ಮೂಲಕ್ಕೆ ಹುಟ್ಟಿದಳೋ, ಹೂ ಬತ್ತಿ ಹೊಸೆಯಲಿಕ್ಕೆ ಮೈ ತಳೆದಳೋ' ಎಂಬಂತೆ ಬಾಳನ್ನು ನೂಕಬೇಕಾದ ಬಾಲವಿಧವೆಯರ ಸ್ಥಿತಿಯಿದ್ದ ಕಾಲದಲ್ಲಿ ಜನಿಸಿದವರು ಶ್ರೀಮತಿ ಭಾಗೀರಥಿಬಾಯಿ ಪುರಾಣಿಕ. ಮದುವೆಯಾದ ಒಂದೆರಡು ವರ್ಷಗಳಲ್ಲೇ ಪತಿಯನ್ನು ಕಳೆದುಕೊಂಡು ವಿಧವೆಯಾದ ಭಾಗೀರಥಿಬಾಯಿಯವರು 'ಗಂಡನನ್ನು ನುಂಗಿಕೊಂಡವಳು' ಎಂಬ ಪಟ್ಟ ಧರಿಸಿದರು. ಅತ್ತೆಯ ಮನೆಯ ಕಡುತರ ಜೀವನವನ್ನು ಅನುಭವಿಸಿ, ಪ್ಲೇಗಿನ ಹಾವಳಿಗೆ ಸಿಲುಕಿದ ತಾಯಿಯ ಮನೆಯ ಸಂಪೂರ್ಣ ವಿನಾಶವನ್ನು ಎದುರಿಸಿದ ನಂತರವೂ ಅವರು ಜೀವನಕ್ಕೆ ಮುಖಮಾಡಿ ನಿಂತದ್ದು ಮೆಚ್ಚುವಂತದ್ದು.

ಚಿಕ್ಕವಯಸ್ಸಿನಲ್ಲೇ ಮದುವೆಯಾಗಿ, ಅರಳುವ ಮುನ್ನವೇ ವಿಧವೆ ಪಟ್ಟ ಕಟ್ಟಿಕೊಂಡು ಮಡಿ ಹೆಂಗಸಾದ ಬಾಯಿಯವರಿಗೆ ವಿದ್ಯಾಭ್ಯಾಸ ಭಾಗ್ಯವಿರಲಿಲ್ಲ. ಕಲಿಯುವ ಹುಚ್ಚು ಬಹಳ ಹೊಂದಿದ್ದ ಭಾಗೀರಥಿಬಾಯಿಯವರ ಕಲಿಕೆ ಕಳ್ಳತನದಿಂದಲೇ ಸಾಗಿತ್ತು. ತಾಯಿಯ ಮನೆತನದಿಂದ ಬಂದ ಆಸ್ತಿಯಲ್ಲಿ ಜೀವನ ನಿರ್ವಹಿಸುತ್ತಿದ್ದ ಬಾಯಿಯವರ ಆಸ್ತಿಯ ಮೇಲೆ ನೆಂಟರಿಷ್ಟರ ಕಣ್ಣು ಬಿದ್ದಿತು. ಕಬಳಿಸಲು ನೂರಾರು ಕೈಗಳು ಮುಂದೆ ಬಂದವು. ಆದರೆ ತಮ್ಮವರೆನ್ನುವವರನ್ನೆಲ್ಲಾ ಕಳೆದು ಕೊಂಡ ಬಾಯಿಯವರು ತಮ್ಮಲ್ಲಿದ್ದ ದ್ರವ್ಯವನ್ನು ಪೂಜೆ, ಪುನಸ್ಕಾರ, ಅತಿಥಿ ಸಂತರ್ಪಣೆಯೆಂದು ಧಾರ್ಮಿಕ ಕಾರ್ಯಗಳಿಗಾಗಿ ವಿನಿಯೋಗಿಸುತ್ತಿದ್ದರು. ಜೊತೆಗೆ ಅವರಿಗಿದ್ದ ತಲೆನೋವಿನ ಬೇನೆಗೆಂದು ಮಾಡಿಕೊಂಡ ಹಲವಾರು ವೈದ್ಯಗಳಿಗಾಗಿ ಸಾಕಷ್ಟು ಹಣ ಖರ್ಚುಮಾಡತೊಡಗಿದರು.

1921ರಲ್ಲಿ ಪ್ರೊ॥ ಕರ್ವೆಯವರು ಧಾರವಾಡಕ್ಕೆ ಭೇಟಿ ನೀಡಿದಾಗ ಅವರು ಅಲ್ಲಿ ಮಾಡಿದ ಮರಾಠಿ ಭಾಷಣವನ್ನು ಕನ್ನಡಕ್ಕೆ ಭಾಷಾಂತರಿಸಿದ ಶ್ರೀಮತಿ ಪುರಾಣಿಕ ಅವರು ಎಲ್ಲರ ಮೆಚ್ಚುಗೆಗೆ ಪಾತ್ರ ರಾದರು. ಪ್ರೊ॥ ಕರ್ವೆಯವರ ಪ್ರೋತ್ಸಾಹದ ನುಡಿ ಅವರಿಗೆ ಮಹಾರಕ್ಷೆಯಾಗಿ ಸಾರ್ವಜನಿಕ ಸೇವೆ ಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬೇಕೆಂಬ ಇಚ್ಛೆ ಬೃಹದಾಕಾರವಾಗಿ ಬೆಳೆಯಿತು. ಧಾರವಾಡದಲ್ಲಿ ಅವರಿಗೆ ವೈದ್ಯರಾಗಿದ್ದ ಡಾ॥ ಮಲೆಬೆನ್ನೂರರೊಡನೆ ಸೇರಿ ಸಮಾಜಕಾರ್ಯ ಮಾಡಬೇಕೆಂದು ನಿರ್ಧರಿಸಿದರು. ತಮ್ಮಲ್ಲಿದ್ದ ಚೂರು–ಪಾರು ಆಸ್ತಿಯನ್ನು ಅದೇ ಕಾರ್ಯಕ್ಕಾಗಿ ವೆಚ್ಚಮಾಡ ಬೇಕೆಂದೂ ನಿರ್ಧರಿಸಿದರು. ಅಷ್ಟೇ ಅಲ್ಲ, ತಮ್ಮ ಜೀವನವನ್ನೇ ಮಹಿಳಾಕಾರ್ಯಕ್ಕಾಗಿ ಮುಡಿಪಾಗಿ ಇಡುವ ಸಂಕಲ್ಪ ತೊಟ್ಟರು. ಡಾ॥ ಮಲೆಬೆನ್ನೂರ್ ಹಾಗೂ ಭಾಗೀರಥಿಬಾಯಿಯವರ ದೃಢಸಂಕಲ್ಪ ಹಾಗೂ ಅಪಾರ ಪರಿಶ್ರಮದ ಫಲವಾಗಿ 192೮ರಲ್ಲಿ ಮೂರ್ತರೂಪ ತಳೆದಿತ್ತು, 'ವನಿತಾ ಸೇವಾ ಸಮಾಜ'.

ಸ್ತ್ರೀಯರ ಶಾರೀರಿಕ, ಮಾನಸಿಕ, ಆಧ್ಯಾತ್ಮಿಕ, ಶೈಕ್ಷಣಿಕ, ನೈತಿಕ ಹಾಗೂ ಆರ್ಥಿಕ ಉನ್ನತಿಯೇ ರಾಷ್ಟ್ರದ ಏಳಿಗೆಗೆ ಮೂಲಕಾರಣವೆಂದು ತಿಳಿದು, ಅದರ ಸರ್ವತೋಮುಖ ಉನ್ನತಿಗಾಗಿ ಹೋರಾಡುವ ಮುಖ್ಯ ಧ್ಯೇಯವನ್ನು ಹೊತ್ತು ಆರಂಭವಾದ್ದು ಈ ವನಿತಾ ಸಮಾಜ. 1928ರಲ್ಲಿ ನಾಲ್ಕಾರು ಪ್ರೌಢ ವಿದ್ಯಾರ್ಥಿನಿಯರಿಗೆ ಅಕ್ಷರ ಜ್ಞಾನ ಮೂಡಿಸುವ ಮೂಲಕ ಬಾಡಿಗೆಯ ಮನೆಯೊಂದರಲ್ಲಿ ಸ್ಥಾಪನೆಯಾದ ಈ ಸಮಾಜ 1966ರವರೆಗೂ ಸುಮಾರು ಮೂವತ್ತೆರಡು ವರ್ಷಗಳ ಅವಧಿಯಲ್ಲಿ ಶಾಲಾ ಶಿಕ್ಷಣ, ವೃತ್ತಿ ಶಿಕ್ಷಣ, ಕಲೆಗಳಲ್ಲಿ ಅನೇಕ ಮಹಿಳೆಯರನ್ನು ತರಬೇತುಗೊಳಿಸಿ ಅವರನ್ನು ಸಮಾಜದಲ್ಲಿ ಗೌರವಾನ್ವಿತ ವ್ಯಕ್ತಿಗಳಾಗಿ ಬದುಕಲು ದಾರಿ ತೋರಿಸಿದೆ. ಇಲ್ಲಿನ 21 ವಿಭಾಗಗಳಿಂದ ಪ್ರತಿವರ್ಷ 1500 ಮಹಿಳೆಯರು ಹಾಗೂ ಮಕ್ಕಳು ಬೇರೆ ಬೇರೆ ರೀತಿಯ ಶಿಕ್ಷಣ ಪಡೆಯುತ್ತಿದ್ದರು.

ಅನಾಥೆಯರು, ಬಡವಿಯರು, ವಿಧವಾ ಹಾಗೂ ಪರಿತ್ಯಕ್ತ ಹೆಣ್ಣುಮಕ್ಕಳಿಗೆ ಶಿಕ್ಷಣಕೊಟ್ಟು ಅವರನ್ನು ಸ್ವಾವಲಂಬಿಗಳನ್ನಾಗಿ ಮಾಡಲು ಟೊಂಕಕಟ್ಟಿ ನಿಂತ ಈ ಸಂಸ್ಥೆಯ ಸದುದ್ದೇಶವನ್ನರಿತು ಧಾರವಾಡ ನಗರ ಸಭೆಯು ಈ ಸಂಸ್ಥೆಗೆ ಮೂರು ಎಕರೆ ಸ್ಥಳವನ್ನು ದಾನ ಮಾಡಿದೆ. ಈ ಸ್ಥಳದಲ್ಲಿ ಸುಮಾರು ಮೂವತ್ತು ಲಕ್ಷ ಬೆಲೆಬಾಳುವ ಸ್ವಂತ ಕಟ್ಟಡವನ್ನು ಕಟ್ಟಲಾಗಿದೆ. ಈ ಕಟ್ಟಡ ನಿರ್ಮಾಣಕ್ಕೆ ತಗುಲಿದ ಖರ್ಚನ್ನು ಈ ಸಂಸ್ಥೆಯ ಹೆಣ್ಣು ಮಕ್ಕಳೇ ಭಾರತದ ಮೂಲೆ ಮೂಲೆಗೂ ಸಂಚರಿಸಿ ಸಾರ್ವಜನಿಕರಿಂದ ಹಣ ಸಂಗ್ರಹಿಸಿದ್ದಾರೆ. ಅಷ್ಟೇ ಅಲ್ಲ, ಕಟ್ಟಡ ಕಟ್ಟುವಾಗ ಅಲ್ಲಿನ ಶ್ರಮಜೀವಿಗಳೊಂದಿಗೆ ತಾವೂ ಶ್ರಮವಹಿಸಿ ಈ ಕಟ್ಟಡ ನಿರ್ಮಿಸಿದ್ದಾರೆ. ಪ್ರತಿ ವರ್ಷ ಈ ಸಂಸ್ಥೆಗೆ ಶಾಲಾ ಶಿಕ್ಷಣ ವಿಭಾಗ, ವೃತ್ತಿ ಶಿಕ್ಷಣ ವಿಭಾಗ, ಸಂಗೀತ–ನಾಟ್ಯಕಲಾ ವಿಭಾಗ, ಕೇಂದ್ರ ಹಾಗೂ ರಾಜ್ಯ ಸರ್ಕಾರದ ಸಮಾಜ ಕಲ್ಯಾಣ ಮಂಡಲಿಗಳಿಂದ ಮತ್ತು ರಿಮ್ಯಾಂಡ್ ಹೋಂ ವಿಭಾಗಗಳಿಂದ 2 ಲಕ್ಷದಷ್ಟು ಅನುದಾನ ಬರುತ್ತಿತ್ತು. ಈ ಸಂಸ್ಥೆಗೆ ಕೇಂದ್ರದ, ರಾಜ್ಯದ ಅನೇಕ ಮಂತ್ರಿ ಮಹಾಶಯರೂ, ಸುಭಾಸ್‌ಚಂದ್ರ ಬೋಸ್, ಮಹರ್ಷಿ ಕರ್ವೆ—ಮುಂತಾದ ಮಹನೀಯರೂ ಭೇಟಿಯಿತ್ತಿದ್ದಾರೆ.

ಕರ್ನಾಟಕದಲ್ಲಿ ಸುಮಾರು ನಲವತ್ತು ವರ್ಷಗಳ ಕಾಲ ವೈಭವದಿಂದ ಅನೇಕ ಮಹಿಳೆಯರಿಗೆ ಜೀವನ ರೂಪಿಸಿಕೊಟ್ಟು ಈಗ ಇಪ್ಪತ್ತು ವರ್ಷಗಳಿಂದ ನಾಮಾವಶೇಷದ ಹಾದಿಯತ್ತ ಸಾಗಿರುವ ಈ ಸಂಸ್ಥೆಯ ವಿದ್ಯಮಾನಗಳ ಬಗ್ಗೆ ಕಳೆದ ಹದಿನೆಂಟು ವರ್ಷಗಳಲ್ಲಿ ಸಾಕಷ್ಟು ಬಾರಿ ಅಧಿಕಾರಿಗಳಿಗೂ ಮಂತ್ರಿವರ್ಗದವರಿಗೂ ತಿಳುವಳಿಕೆ ಮೂಡಿಸಿ ಸುಧಾರಣೆ ತರಲು ಇಲ್ಲಿನ ಸದಸ್ಯೆಯರು ಒತ್ತಾಯಿಸುತ್ತಿದ್ದಾರೆ. ಆದರೆ ಇನ್ನೂ ಪ್ರತಿಕ್ರಿಯೆ ಕಂಡುಬಂದಿಲ್ಲ.

ಇಂದು ಕಲಿತ ವಿದ್ಯಾವಂತ ಮಹಿಳೆಯರ ಸಂಖ್ಯೆ ಹೆಚ್ಚುತ್ತಿದ್ದರೂ ತಮ್ಮ ಸುತ್ತಲ ಪರಿಸರದ ಬಗ್ಗೆ ಜಾಗೃತ ಪ್ರಜ್ಞೆಯನ್ನು ಬೆಳೆಸಿಕೊಳ್ಳುತ್ತಿರುವವರ ಸಂಖ್ಯೆ ನಿರಾಶಾದಾಯಕವಾದದ್ದು. ಸಮಾಜದ ಅನ್ಯಾಯ, ದೌರ್ಜನ್ಯಗಳಿಗೆ ಬಲಿಯಾಗಿರುವ, ಆಗುತ್ತಿರುವ ಅಸಂಖ್ಯ ಹೆಣ್ಣುಗಳ ಉದ್ಧಾರ ಹಾಗೂ ಪುನರ್ವಸತಿಯ ಸಮಸ್ಯೆಗೆ ಪರಿಹಾರ ಇನ್ನೂ ಪ್ರಶ್ನಾರ್ಥಕವಾಗಿಯೇ ಉಳಿದಿದೆ. ತಮ್ಮ ಕಾರ್ಯ ಕ್ಷೇತ್ರವನ್ನು ತಾವೇ ಸ್ವಯಂ ನಿಗಧಿಪಡಿಸಿಕೊಂಡಿರುವ ನಮ್ಮ ಬಹಳಷ್ಟು ಕಲಿತ ಹೆಣ್ಣು ಮಕ್ಕಳು ತಮ್ಮ ಜೀವನದ ಗುರಿ, ವ್ಯಾಪ್ತಿಯನ್ನೂ ಕೂಡ ಸೀಮಿತಗೊಳಿಸಿಕೊಂಡು ಸಾಮಾಜಿಕ ಜವಾಬ್ದಾರಿಗಳಿಗೆ ಕಿವುಡಾಗುತ್ತಾರೆ; ಇಲ್ಲವೆ ಪಲಾಯನವಾದಿಗಳಾಗುತ್ತಾರೆ. ಇದಕ್ಕೊಂದು ಅಪರೂಪದ ಅಪವಾದವಾಗಿರುವ ಶ್ರೀಮತಿ ಭಾಗೀರಥಿಬಾಯಿ ಪುರಾಣಿಕ ಅವರ ನಿದರ್ಶನವನ್ನು ಅವರು ಜನಿಸಿದ ನೂರನೆಯ ವರ್ಷವಾದ ಇಂದು ನೆನಪಿಸಿಕೊಂಡು ಅದನ್ನು ನಮ್ಮ ಆದರ್ಶವಾಗಿಸಿಕೊಳ್ಳೋಣ.

—ಎನ್. ಗಾಯತ್ರಿ

# ವಿಶ್ವಸಂಸ್ಥೆಯಲ್ಲಿ ಪಕ್ಷಪಾತ

ವಿಶ್ವಸಂಸ್ಥೆ (ಯುನೈಟೆಡ್ ನೇಷನ್ಸ್)ಯು ಹೆಸರು ಜಗತ್‌ಖ್ಯಾತಿ ಪಡೆದಿದೆ. ಅಂತರರಾಷ್ಟ್ರೀಯ ಮಹಿಳಾ ವರ್ಷ, ಮಹಿಳಾ ದಶಕ ಘೋಷಣೆ ಮಾಡಿ ಮಹಿಳೆಯರ ಅಭಿವೃದ್ಧಿಗೆ ವಿಶ್ವದ ನಾನಾ ರಾಷ್ಟ್ರಗಳಿಗೆ ಮಾರ್ಗದರ್ಶನ ನೀಡುವ ವಿಶ್ವಸಂಸ್ಥೆಯಲ್ಲಿ ಮಹಿಳೆಯರನ್ನು ಕುರಿತು ಎಂಥ ಧೋರಣೆ ಕಂಡು ಬರುತ್ತದೆ? ಇದರ ಉತ್ತರ ಕುತೂಹಲಕಾರಿಯಾಗಿದೆ.

ಜಿನಿವಾದಲ್ಲಿ ಒಂದು ಪುರುಷರ ಸಂಸ್ಥೆ ಇದೆ. ವಿಶ್ವ ಸಂಸ್ಥೆಯ ಐರೋಪ್ಯ ಕೇಂದ್ರ ಕಛೇರಿ ಎಂಬ ಹೆಸರಿನ ಈ ಸಂಸ್ಥೆಯಲ್ಲಿ ಪುರುಷರು ತಮ್ಮ ಅಧಿಕಾರ ಸ್ಥಾಪನೆಗೇ ಹೆಚ್ಚು ಗಮನ ಕೊಡುತ್ತಿದ್ದಾರೆ ಎಂದು ಜಿನಿವಾದಲ್ಲಿರುವ ವಿಶ್ವಸಂಸ್ಥೆಯಲ್ಲಿನ ಮಹಿಳಾ ಕ್ರಿಯಾ ತಂಡವೊಂದರ ನಾಯಕಿ ರೇಮಂಡ್ ಮಾರ್ಟಿನ್ಯು ಹೇಳುತ್ತಾರೆ. ಸಾಮಾನ್ಯವಾಗಿ ರಾಜಕೀಯ ನಿರ್ಣಯ ಕೈಗೊಳ್ಳುವಾಗ ಮಹಿಳೆಯನ್ನು ಹೊರಗೇ ಇರಿಸಲಾಗುತ್ತದೆ ಎಂದು ಅದೇ ಗುಂಪಿನ ಮತ್ತೊಬ್ಬ ಸದಸ್ಯೆ ತಿಳಿಸುತ್ತಾರೆ. ಮಹಿಳಾ ವರ್ಷ ಕಳೆದು 15 ವಸಂತಗಳು ಉರುಳಿ ಹೋಗಿವೆ. ಆದರೆ ಮಹಿಳಾ ಹಕ್ಕುಗಳ ಬಗ್ಗೆ ತಾನು ಗಂಭೀರ ನಿಲುವು ತಳೆದಿದ್ದೇನೆ ಎಂಬುದನ್ನು ತನ್ನ ಮಹಿಳೆಯರಿಗೆ ಮನದಟ್ಟು ಮಾಡಿಕೊಡುವಲ್ಲಿ ವಿಶ್ವಸಂಸ್ಥೆ ವಿಫಲವಾಗಿದೆ ಎಂದು ಹೇಳಬಹುದು.

ವಿಶ್ವಸಂಸ್ಥೆಯ ವ್ಯವಸ್ಥೆಯಲ್ಲಿ ಪ್ರತಿಯೊಬ್ಬ ಮಹಿಳೆಯೂ ಸಮರ್ಥಳಾದ ಟೈಪಿಸ್ಟ್. ವಿಶ್ವಸಂಸ್ಥೆಯಲ್ಲಿ ಸಮಾವೇಶಗಳು ಸಾಮಾನ್ಯ. ಅಂಥ ಸಮಾವೇಶಗಳಲ್ಲಿ ಒಬ್ಬ ಮಹಿಳೆ ಶ್ಲಾಘನೆ, ಹೊಗಳಿಕೆ ಸ್ವೀಕರಿಸಲು ನಿಂತಿಲ್ಲ ವೆಂದರೆ, ಅವಳು ಟೈಪರೈಟರ್ ಬಳಿ ಕುಳಿತಿದ್ದಾಳೆಂದೇ ಅರ್ಥ. ಎಷ್ಟೋ ಬಾರಿ ಅವಳು ಇಡೀ ಭಾಷಣಗಳನ್ನು ಒಪ್ಪಗೊಳಿಸಿ ಸಿದ್ಧಪಡಿಸುತ್ತಾಳೆ. ಅವಳು ಡಾಕ್ಟರೇಟ್ ಪಡೆದುಕೊಂಡು ಅನೇಕ ಭಾಷೆಗಳಲ್ಲಿ ಕರಡು ನಿರ್ಣಯ ಗಳನ್ನು ಬರೆಯುವ ಸಾಮರ್ಥ್ಯ ಹೊಂದಿರಬಹುದು. ಆದರೆ ಮೊದಲು ಅವಳಿಗೆ ಟೆಲಿಫೋನ್‌ನಲ್ಲಿ ಮಾತನಾಡು ವುದು, ಸಂದೇಶಗಳನ್ನು ಸ್ವೀಕರಿಸುವುದು, ಕಾಪಿ ಮಾಡುವುದು, ಮಾತನಾಡಿದಾಗ ಮಾತ್ರ ತುಟಿ ಬಿಚ್ಚು ವುದು ಮತ್ತು 'ಪ್ರೀತಿಯ ಹುಡುಗಿ' ಎಂದಾಗ ನಗು ವುದು ತಿಳಿದಿರಬೇಕು.

## ವರದಿಗಳ ಕಂತೆ

ಮಹಿಳೆಯರ ಬಗ್ಗೆ ಇರುವ ಪಕ್ಷಪಾತ ಧೋರಣೆಯನ್ನು ಪರಿಶೀಲಿಸಿ ಅವುಗಳ ನಿವಾರಣೆಗೆ ಸಲಹೆ ಸೂಚಿಸಲು ಜಗತ್ತಿನಾದ್ಯಂತ ಅಸಂಖ್ಯ ಸಮಿತಿಗಳನ್ನು ವಿಶ್ವಸಂಸ್ಥೆ ರಚಿಸಿದೆ. ಜಿನಿವಾದಲ್ಲಿರುವ ಅದರ ವಿವಿಧ ಅಂಗಸಂಸ್ಥೆಗಳ ಶೆಲ್ಫ್‌ಗಳಲ್ಲಿ ಮಹಿಳಾ ಸ್ಥಾನಮಾನ ಕುರಿತ ಅಸಂಖ್ಯ ವರದಿಗಳು ತುಂಬಿವೆ. ಆದರೆ ವಿಶ್ವ ಆರೋಗ್ಯ ಸಂಸ್ಥೆಯು ಮೊಲೆ ಹಾಲುಣಿಸುವಿಕೆ ಕುರಿತಂತೆ ಒಂದು ಸಮಿತಿ ರಚಿಸಿದೆ. ಇದರಲ್ಲಿ ಇರುವ ಸದಸ್ಯರೆಲ್ಲರೂ ಪುರುಷರು. ಈ ವಾಸ್ತವಾಂಶಕ್ಕೆ ಯಾವ ಅಧ್ಯಯನ ಉತ್ತರಿಸುತ್ತದೆ ಎಂದು ಜಿನಿವಾದಲ್ಲಿನ ಮಹಿಳೆಯರು ಕೇಳುತ್ತಾರೆ. ದುಡಿಮೆ ಸ್ಥಳದಲ್ಲಿ ಅಸಮಾನತೆಯನ್ನು ತೊಡೆದುಹಾಕಲು ವಿಶ್ವ ನಾಯಕತ್ವ ವಹಿಸಬೇಕಾಗಿರುವ ವಿಶ್ವ ಕಾರ್ಮಿಕ ಸಂಸ್ಥೆ(ಐ.ಎಲ್.ಓ)ಯಲ್ಲಿನ ವೃತ್ತಿಪರ ಹುದ್ದೆಗಳಲ್ಲಿ ಶೇ. 20ರಷ್ಟು ಕೂಡ ಮಹಿಳೆಯರಿಗೆ ದೊರೆತಿಲ್ಲ. ಮತ್ತೊಂದು ಸ್ವಾರಸ್ಯಕರ ವಿಚಾರ—ವಿಶ್ವಸಂಸ್ಥೆಯಲ್ಲಿನ ನೌಕರಿಯೊಂದಕ್ಕೆ ಸಂದರ್ಶನ ನಡೆಯಿತು. ಮಹಿಳಾ ಅಭ್ಯರ್ಥಿಯೊಬ್ಬರನ್ನು 'ನೀವು ಕಮ್ಯುನಿಸ್ಟರೆ, ಫೆಮಿನಿಸ್ಟರೆ' ಎಂದು ಕೇಳಲಾಯಿತು.

ವಿಶ್ವಸಂಸ್ಥೆಯಲ್ಲಿ ಉದ್ಯೋಗವನ್ನು ಎರಡು ವರ್ಗ ಮಾಡಲಾಗಿದೆ : ಸಾಮಾನ್ಯ ಸೇವೆ (ಜಿ ಸೇವೆ) ಮತ್ತು ವೃತ್ತಿಪರ. ಜಿ ಸೇವೆಯಲ್ಲಿ ಟೈಪಿಸ್ಟ್, ಕಾರ್ಯದರ್ಶಿ ಮತ್ತು ಸಂಶೋಧನಾ ಸಹಾಯಕರು ಬರುತ್ತಾರೆ. ಪಿ ಸೇವೆಯಲ್ಲಿ ಅರ್ಥಶಾಸ್ತ್ರಜ್ಞರು, ವಿಜ್ಞಾನಿಗಳು ಮತ್ತು

ಮಾಹಿತಿ ಅಧಿಕಾರಿಗಳು ಇದ್ದಾರೆ. ಪಿ ಮಟ್ಟದ ನಂತರ ಡೈರೆಕ್ಟರ್ ಹುದ್ದೆ, ಸಹಾಯಕ ಸೆಕ್ರೆಟರಿ ಜನರಲ್ ಮತ್ತು ಅಂಡರ್ ಸೆಕ್ರೆಟರಿ ಜನರಲ್ ಹುದ್ದೆಗಳು ಬರುತ್ತವೆ. ವಿಶ್ವಸಂಸ್ಥೆಗೆ ಸೇರಿದ ವಿವಿಧ ಸಂಸ್ಥೆಗಳಲ್ಲಿ ನಡೆಸಿದ ಒಂದು ಸಮೀಕ್ಷೆಯಿಂದ ವಿಶ್ವಸಂಸ್ಥೆಯಲ್ಲಿನ ಒಟ್ಟು ಮಹಿಳೆಯರಲ್ಲಿ ಶೇಕಡ 80 ಮಂದಿ ಸಾಮಾನ್ಯ ಸೇವೆಗಳಲ್ಲಿ ಇರುವುದು ವ್ಯಕ್ತವಾಯಿತು. ಪಿ ವರ್ಗದಲ್ಲಿ ಅವರ ಸಂಖ್ಯೆ ಶೇಕಡ 18ಕ್ಕಿಂತ ಹೆಚ್ಚಿಲ್ಲ. ಇತ್ತೀಚಿನ ದಿನಗಳವರೆಗೆ ವೃತ್ತಿಪರ (ಪಿ) ಮಟ್ಟ ಸೇವೆಗೆ ಮಹಿಳೆಯರನ್ನು ನೇಮಕ ಮಾಡಿಕೊಳ್ಳುತ್ತಿರಲಿಲ್ಲ. ಈಗ ಅವರನ್ನು ವೃತ್ತಿಪರ ಸೇವೆಯ ಕೆಳಮಟ್ಟಕ್ಕೆ, ಪುರುಷ ಅಭ್ಯರ್ಥಿಗಿಂತ ಹೆಚ್ಚು ವಿದ್ಯಾರ್ಹತೆ ಇದ್ದರೂ, ನೇಮಕ ಮಾಡಿಕೊಳ್ಳಲಾಗುತ್ತಿದೆ. ವೃತ್ತಿಪರ ಸೇವೆಯ ಮಧ್ಯಮ ಮಟ್ಟದ ಶ್ರೇಣಿಯಲ್ಲಿ ಕೆಲಸ ಮಾಡುತ್ತಿರುವ ಶೇಕಡ 30ರಷ್ಟು ಮಹಿಳೆಯರಿಗೆ ಡಾಕ್ಟರೇಟ್ ಪದವಿ ಇದೆ ; ಅದೇ ಪುರುಷರಲ್ಲಿ ಶೇಕಡ 16 ಮಂದಿಗೆ ಮಾತ್ರ ಡಾಕ್ಟರೇಟ್ ಇದೆ.

ಉನ್ನತ ಮಟ್ಟದಲ್ಲಂತೂ ಮಹಿಳೆಯರ ಸಂಖ್ಯೆ ಅಗಣ್ಯ. 1988ರ ಡಿಸೆಂಬರ್ ವೇಳೆಗೆ ಡೈರೆಕ್ಟರ್ ಹುದ್ದೆಗಳಲ್ಲಿ ಶೇಕಡ 6ರಷ್ಟು ಮಾತ್ರ ಮಹಿಳೆಯರಿದ್ದರು.

### ವಾದ–ಪ್ರತಿವಾದ

ವಿಶ್ವಸಂಸ್ಥೆ ಮಹಿಳೆಯರನ್ನು ನೇಮಕ ಮಾಡಿಕೊಳ್ಳುವಾಗ ಒಂದು ಸಮಸ್ಯೆಯನ್ನಂತೂ ಎದುರಿಸುತ್ತಿದೆ. ಹುದ್ದೆಗಳನ್ನು ತುಂಬಲು ಸದಸ್ಯ ರಾಷ್ಟ್ರ ಸರ್ಕಾರಗಳು ಮಹಿಳಾ ಅಭ್ಯರ್ಥಿಗಳ ಹೆಸರನ್ನು ಸೂಚಿಸುವುದೇ ಇಲ್ಲ ಎಂದು ಅದು ದೂರುತ್ತದೆ. ಆದರೆ ಜಿನಿವಾದಲ್ಲಿ ಮಹಿಳೆಯರು "ಅದು ಸಮಸ್ಯೆಯ ಒಂದು ಮುಖ" ಎನ್ನುತ್ತಾರೆ. ಹುದ್ದೆ ಕುರಿತಂತೆ ಮಾಹಿತಿ ಒದಗಿಸುವ ನಿಯಂತ್ರಣವು ಪುರುಷರ ಕೈಯಲ್ಲಿದೆ. ಉದಾಹರಣೆಗೆ "ಪಿ ಸೇವೆಯಲ್ಲಿ ಹುದ್ದೆ ಖಾಲಿ ಇದ್ದರೆ, ಈ ಪುರುಷರು ತಮ್ಮ ರಾಷ್ಟ್ರಗಳಲ್ಲಿನ ಸ್ನೇಹಿತರಿಗೆ ತಿಳಿಸುತ್ತಾರೆ. ಟೈಪಿಸ್ಟ್ ಹುದ್ದೆ ಇದ್ದರೆ ತಮ್ಮ ಪತ್ನಿಗೆ ತಿಳಿಸಿಬಿಡುತ್ತಾರೆ."

ಪ್ರಮುಖ ವಿಷಯಗಳಲ್ಲಿ ಕೂಡ ಮಹಿಳೆಯರನ್ನು ದೂರ ಇಡಲಾಗಿದೆ. ನಿಶ್ಶಸ್ತ್ರೀಕರಣ ಕುರಿತ ಚರ್ಚೆ, ಕಾರ್ಯಗಳಲ್ಲಿ ಸುಮಾರು 800 ಜನ ತೊಡಗಿದ್ದಾರೆ. ಆದರಲ್ಲಿ ಮಹಿಳೆಯರ ಸಂಖ್ಯೆ ಎರಡು ಮಾತ್ರ. ರಾಜಕೀಯ ಮಹತ್ವ ಇರುವ ನಿಯೋಗಗಳಲ್ಲಿ ಮಹಿಳೆಯರ ಸಂಖ್ಯೆ ಪರೋಕ್ಷವಾಗಿ ಇಳಿಮುಖವಾಗಿಬಿಟ್ಟಿರುತ್ತದೆ ಎಂದು ಜಿನಿವಾ ಮಹಿಳೆಯರು ಹೇಳುತ್ತಾರೆ.

ಅಗತ್ಯ ಬದಲಾವಣೆಗೆ ರಾಜಕೀಯ ದೃಢನಿರ್ಧಾರವಿಲ್ಲದಿದ್ದರೆ ಮಹಿಳೆಯರ ಸ್ಥಾನಮಾನ ಸುಧಾರಣೆಯ ಹೋರಾಟದಿಂದೇನು ಪ್ರಯೋಜನ ? ಎಂಬುದು ಈ ಮಹಿಳೆಯರ ಪ್ರಶ್ನೆ.

—ದೇವಿ

('ದಿ ಹಿಂದೂ' ಪತ್ರಿಕೆಯಲ್ಲಿ ಚಿತ್ರಾ ಸುಬ್ರಮಣಿಯಂ ಅವರ ಲೇಖನ ಆಧಾರಿತ)

  

---

### ವರದಕ್ಷಿಣೆ ಹಿಂಸೆಗೆ ಒಳಗಾದವರಿಗೆ ಸಹಾಯ

ವರದಕ್ಷಿಣೆ ಕಾರಣಕ್ಕಾಗಿ ಹಿಂಸೆಗೆ ಒಳಗಾಗುವವರ ನೆರವಿಗಾಗಿ ಬೆಂಗಳೂರಿನಲ್ಲಿ 'ಸಂಕಷ್ಟ ಸಹಾಯ ಟೆಲಿಫೋನ್' ವ್ಯವಸ್ಥೆ ಮಾಡುವುದಾಗಿ ಕರ್ನಾಟಕ ರಾಜ್ಯ ಕೇಂದ್ರ ಸಮಾಜಕಲ್ಯಾಣ ಸಲಹಾ ಮಂಡಳಿ ಅಧ್ಯಕ್ಷೆ ಶೌಕತ್ ಖುರೇಷಿ ಹೇಳಿದ್ದಾರೆ. ತುರ್ತು ಸಹಾಯ ಹಾಗೂ ಪರಿಹಾರ ಅದರ ಉದ್ದೇಶ.

### ಮನೆಕೆಲಸದವರಿಗೆ ಹಾಸ್ಟೆಲ್

ಮನೆ ಕೆಲಸ ಮಾಡುವ ಮಹಿಳೆಯರಿಗಾಗಿ ವಸತಿಗೃಹ (ಹಾಸ್ಟೆಲ್) ನಿರ್ಮಿಸಲು ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ಕಾರ್ಪೊರೇಷನ್ ಉದ್ದೇಶಿಸಿದೆ. ಇದರಲ್ಲಿ ಒಂದು ನೂರು ಜನಕ್ಕೆ ಅವಕಾಶ ಕಲ್ಪಿಸಿ ತಲಾ 50ರೂ. ಶುಲ್ಕ ವಿಧಿಸುವ ಯೋಚನೆ ಸರ್ಕಾರದ್ದು.

## ಕವನ

### ಮತ್ತೊಬ್ಬ ಸೀತೆ

ಈಕೆ
ಮಹಾಸಾಧ್ವಿ
ಸೀತೆಯಂಥವಳು

ದಟ್ಟ ಕಾಡಿನಲ್ಲಿ ವಿಶ್ವಾಮಿತ್ರನ ಆತುರಕ್ಕೆ
ಮೇನಕೆಯ ಕಾವಿಗೆ
ಹುಟ್ಟಿದಳು ಶಕುಂತಲೆಯ ಹಾಗೆ

ಆ ರಾತ್ರಿ ಕತ್ತಲೆಯ ಅಳುವಿಗೆ
ಬೆದರಿ ಕೆನೆದವು
ಒಂದು ರಾಜ್ಯದ ರಥದ ಕುದುರೆಗಳು.

ಬೆಳೆದಿದ್ದು ಅರಮನೆಯಲ್ಲಿ
ಭರ್ಜಿ ಬಾಕುಗಳ ಸರಹದ್ದು

ನಿಶ್ಶಬ್ದಕ್ಕೆ ಸಂದವು
ಯಾತನೆಯ ಹಗಲು ರಾತ್ರಿಗಳು
ಜನಕನ ತೋಳುಗಳು
ಆಲದ ಬಿಳಿಲುಗಳು
ತೂಗಿದವು ನೆರಳಾಗಿ

ವರ್ಷಗಳೇ ವಾಗಿ
ಪ್ರಾಯ ಬಂದಾಗ
ಎದೆ ತುಂಬ ಹುಚ್ಚು ಹೊಳೆ
ಒಳ–ಹೊರಗೆ ಧೋ ಕುತೂಹಲದ ಮಳೆ

ಒಂದು ದಿನ ವಸಂತದಲಿ
ತುಕ್ಕು ಹಿಡಿದ ಅಪ್ಪನ ಶಿವಧನಸ್ಸುಗಳ
ಮುರಿದವನ
ಉದ್ಗಾರಗಳ ನಡುವೆ
ವರಿಸಿದ್ದಳು ಈಕೆ

ಮುರಿದ ಬಿಲ್ಲುಗಳು–ತನ್ನ ಮೈ, ಮೂಳೆಗಳು
ಕಂಪಿಸಿದಳು ಒಳಗೊಳಗೆ

ರಾತ್ರಿ ಸುಖ ಹಾರಿದವು ದೂರ
ನಿಟ್ಟುಸಿರು ನಾಳೆಗಳ ಆಳಿದವು

ಕಳೆದು ಹೋದವು ಎಲ್ಲಿ ?
ಎಲ್ಲ ಸಂಭ್ರಮ ಸಡಗರ
ಮನಸ್ಸಿಗೇಕೆ ಇಂಥ ದಣಿವು

ರಾತ್ರಿ ಹೆಪ್ಪುಗಟ್ಟಿದಂತೇಕೆ
ಈ ದಾಹ ವ್ಯಾಮೋಹ
ಇನ್ನೆಷ್ಟು ದಿನ ಈ ಶಿಕ್ಷೆ

ಈಕೆ ಮೊರೆಯಿಡುತ್ತಾಳೆ
ಓ ಅಗಮ್ಯ ಸುಖದ ಕ್ಷಣಗಳೇ
ಇಲ್ಲಿ ಹೂ ಅರಳುವಾಗ
ಮರಗಿಡ ಚಿಗುರುವಾಗ
ನನ್ನ ಗಂಡನಿಗೆ ಷಂಡತ್ವ ನೀಡಿದ ನಿಮಗೆಂಥ
ಕಠಿಣ ಹೃದಯ

ಬೆಳದಿಂಗಳಲ್ಲಿ
ಬಂಗಾರದ ಜಿಂಕೆ ಹುಡುಕುವ
ಧೀರೋದಾತ್ತ ಗಂಡ
ಹಗಲು ರಾತ್ರಿಗಳ ಹಿಡಿದು ಹಿಂಡುವ ಬಯಕೆ
ಹಿಮದೊಳಗಿನ ಕೆಂಡ

"ಅಯ್ಯೋ....ಕಾಡು ಹೊತ್ತಿ ಉರಿಯುತ್ತಿದೆ
ಏಳೇ....ನು ?
ಏಳು ಸಾವಿರ ಗೆರೆದಾಟಿ ಬಂದೇನು"
ಬಾ ಬಾರೋ ರಾವಣ್ಣ
ಪರ್ಣಕುಟೀರದ ಹೊಸ್ತಿಲಲ್ಲಿ
ಭಿಕ್ಷೆ ಹೊತ್ತು ಕಾದಿದ್ದಾಳೆ ಈಕೆ
ಸೀತೆಯಂಥ
ಸಾಧ್ವಿ

—ನಾರಾಯಣಸ್ವಾಮಿ ಕೆ.

## ಅಜ್ಜಿಯ ಕತೆ

ಮೊನ್ನೆಸಲ ಊರಿಗೆ ಹೋಗಿದ್ದಾಗ ಯಥಾಪ್ರಕಾರ ರಾತ್ರೆ ಉಂಡು ಹೊರಗೆ ಅಂಗಳದ ಕಟ್ಟೆಯಮೇಲೆ ಮಲಗಿದ್ದೆ. ಹತ್ತಿರದಲ್ಲೆ ಅಜ್ಜಿ ಎಲೆ ಅಡಿಕೆ ಕುಟ್ಟುತ್ತಿರುವ ಕುಟ್ಟಾಣಿ ಸದ್ದೂ, ವಯಸ್ಸಾದುದಕ್ಕೋ, ಅಪಚನಕ್ಕೋ ಆಗಾಗ ಪರಿಸರವೇ ಗದಗುಟ್ಟುವ ಹಾಗೆ ಢರ್‍್ರs....ಢರ್‍್ರs.... ಎಂದು ಬುಸುಗುಟ್ಟುತ್ತಾ ಬರುವ ತೇಗುಗಳೂ ಕೇಳಿಸುತ್ತಿದ್ದವು. ಇದು ಒಂದು ಥರ ಹಿನ್ನೆಲೆ ಸಂಗೀತದ ಹಾಗೆ ಎಂದುಕೊಂಡು ಮಲಗಿ ಮಗ್ಗುಲಾದೆ. ಹಾಳಾದ್ದು ನಿದ್ದೆಯೇ ಬರುವೊಲ್ಲದು.

"ಈ ಎಲೆಅಡಿಕೆ ಕುಟ್ಟಾಣಿ ಎಷ್ಟೊಂದು ವರ್ಷಗಳಿಂದ ಎಷ್ಟೊಂದು ಎಲೆಅಡಿಕೆಗಳನ್ನು ತನ್ನೊಳಗೆ ಕುಟ್ಟಿಸಿಕೊಂಡಿರಬಹುದು, ಕಷ್ಟಗಳಿಗೆ ಮೈಯೊಡ್ಡಿ, ಮೈಯೊಡ್ಡೀ ಸುಕ್ಕುಸುಕ್ಕಾಗಿರುವ ಅದರೊಡತಿಯದ್ದೇ ಅದರ ಜೀವನವೂ, ಇತ್ಯಾದಿ ಇತ್ಯಾದಿ ನನ್ನೊಳಗಿನ ಕತೆಗಾರ ಸಾಹಿತ್ಯಕ ಭಾಷೆಯಲ್ಲಿ ಕೊರೆಯತೊಡಗಿದ. ಇದಕ್ಕಿಂತ 'ಅಜ್ಜಿಯ ಕೊರತವೇ ವಾಸಿ' ಎಂದು ಟವಲನ್ನೇ ಭುಜಕ್ಕೆ ಏರಿಸಿ ನಡೆದೆ. ಇದ್ದಕ್ಕಿದ್ದಂತೆ ನಾನು ಚಿಕ್ಕವನಾಗಿದ್ದಾಗ ಇಂಥವೇ ಬೆಳುದಿಂಗಳ ರಾತ್ರಿಗಳಲ್ಲಿ, ಇದೇ ಅಜ್ಜಿಯ ಸೆರಗಿನ ಬೆಚ್ಚನೆ ಆಸರೆಯೊಳಗೆ ಕುಳಿತು ರಾಜರಾಣಿಯರ, ರಾಕ್ಷಸರ, ಸೇವಕರ, ಸಾಮಂತರ ಕತೆ ಕೇಳುತ್ತಿದ್ದದ್ದು ನೆನಪಿಗೆ ಬಂದುಬಿಟ್ಟಿತು. ಈ ಪುರಾತನ ಕಾಲದ ಅಜ್ಜಿಯ ಕಲ್ಪನಾಲೋಕದೊಳಗೊಂದು ಪಾತ್ರವಾಗಬೇಕೆಂಬ ಇಚ್ಛೆ ಹೊಳೆದುಬಿಟ್ಟಿತು. ಅಜ್ಜಿಯ ಮುಂದೆ ಹೋಗಿ ನೆಲಕ್ಕೆ ಟವೆಲ್ಲು ಝಾಡಿಸಿ ಕುಳಿತ. ಅಜ್ಜಿ ಮಾತನಾಡಲಿಲ್ಲ. ಕುಟ್ಟುವುದನ್ನು ಮುಗಿಸಿ, ಯಾವುದೋ ಲಯಕ್ಕೆ ಬದ್ಧವಾದ ಹಾಗೆ ವಿಚಿತ್ರಗತಿಯೊಳಗೆ ಅದರೊಳಗಿನದ್ದನ್ನು ಹೆಬ್ಬೆರಳು ಮತ್ತು ಇನ್ನೆರಡು ಬೆರಳುಗಳಿಂದಷ್ಟೇ ಸಂಗ್ರಹಿಸಿ, ಬಾಯೆಂಬ ಕಂದರದಲ್ಲಿ ಎಸೆದುಕೊಂಡಿತು. ನಾನು ಮೌನವಾಗಿ ಅದರ ಮುಖದ ಸುಕ್ಕುಗಳನ್ನು ಎಣಿಸುತ್ತಿದ್ದೆ. ಒಂದು ಚನ್ನಾಗಿ ಜಗಿದು, ರಸವನ್ನು ಪಿಚಕಾರಿಯ ಹಾಗೆ ದೂರಚಿಮ್ಮಿಸಿ, ತಂಬಾಕು ಬಾಯಿಗೆ ಎಸೆದುಕೊಂಡು, ಎಲೆ ಅಡಿಕೆಯನ್ನು ಬಂದು ಉಂಡೆಯನ್ನಾಗಿಸಿಕೊಂಡು ದವಡೆಯ ಒಂದು ಭಾಗಕ್ಕೆ ಒತ್ತರಿಸಿಕೊಂಡಿತು.

....ಒಂದು ಕ್ಷಣ ಮೌನ....

"ಏನೋ, ಸಿದ್ಲಿಂಗ ಪ್ಯಾಟಗೆ ಹೋಗಿ ಸಾಹೇಬಗಿರಿ ಮಾಡ್ತೀಯಂತ, ಈ ಮುದಿ ಅವ್ವ ಯಾಕ ಬೇಕಾದಾಳೀಗ....?"

ನಾನು ನಿಧಾನವಾಗಿ ನನ್ನ ಕತೆ ಕೇಳುವ ಆಸೆಯನ್ನು ಮುಂದಿಟ್ಟೆ, ಪುಸಲಾಯಿಸಿದೆ.

○ ಭಾರತಿ ಕಿನ್ನಾಳ್

"ಹೋಗೋ ಮೂಳ. ದೊಡ್ಡ ದೊಡ್ಡ ಪುಸ್ತಕದಾಗಿನ ಕತಿಗೋಳನ್ನ ಓದತೀಯಂತೆ....ನಿನಗ್ಯಾಕ ಈ ಅಜ್ಜಿಯ ಹಾಳುಮೂಳು ಕತಿ...." ಅಂದರೂ, ಕತೆ ಹೇಳುವ ಚಟಕ್ಕೋ ನನ್ನ ಪುಸಲಾವಣೆಗೋ ಬಗ್ಗಿ, ಕತೆಯ ನಡು ನಡುವೆ ಹೂಂ, ಹೂಂ ಅಂತಿರಬೇಕೆಂದೂ ಮತ್ತೆ ನಡು ನಡುವೆ ಬಾಯಿ ಹಾಕಬಾರದೆಂದೂ ಎರಡು ಸಾಂಪ್ರದಾಯಿಕ ಷರತ್ತುಗಳನ್ನು ವಿಧಿಸಿ, ರಸವನ್ನು ಉಗುಳಿತು.

"ಸುರುಮಾಡಲ್ಯಾ ಹಂಗಾರ....?"

"ಹೂಂ...."

"ಹಂಗಾರ ಕೇಳಿಲ್ಲೆ. ಒಂದೂರಾಗ ಒಬ್ಬ ರಾಜಾ ಇದ್ದ. ರಾಜಾ ಅಂದ್ರೇನಪಾ....ಮಹಾರಾಜ....ಆರು ತೆಂಗಿನ ಮರದಷ್ಟು ಎತ್ತರಿದ್ದ. ಜೋರು ಮೀಶಿ ಬಿಟ್ಟಿದ್ದ, ಎಂಥಾ ಮೀಷಿ ಅಂತೀದಿ, ಗಲ್ಲದ ಎರಡೂ ಕಡಿ ಒಂದೊಂದು ನಿಂಬಿಹಣ್ಣು ಇಟ್ಟರ, ಥಕಥಕಾ ಕುಣಿಬೇಕು ಅಂಥಾ ಮೀಶಿ. ಈ ರಾಜಗ ದೊಡ್ಡಂಬೋ ದೊಡ್ಡದೊಂದು ಸೈನ್ಯಾ ಇತ್ತು. ರಾತ್ರೋರಾತ್ರಿ ಬ್ಯಾರೆಬ್ಯಾರೆ ರಾಜ್ಯಕ್ಕೆ

ದಂಡೆತ್ತಿ ಹೋಗಿ ಆಯಾ ರಾಜರನ್ನ ಕೊಂದು ರಾಜ್ಯ ದೊಡ್ಡದು ಮಾಡಿದ್ದ. ಹೀಂಗ ಯುದ್ಧಕ್ಕ ಹೋದಾಗ ಲೆಲ್ಲ ಅಲ್ಲಿನ ರಾಜರ ಹೆಂಡಂದ್ರು, ಅವರ ಮಕ್ಕಳು, ಆ ರಾಜದಾಗಿನ ಚಲುವಿ ಹೆಣ್ಮಕ್ಕಳನ್ನ ತಂದು ತನ್ನ ಅಂತಃ ಪುರದಾಗ ಇಟ್ಟಿದ್ದ.

ಈ ಅಂತಃಪುರದಾಗ ಇಂಥಾವೇ ಹದಿನಾರು ಸಾವಿರದ ನೂರಎಂಟು ಹೆಂಡಂದಿರಿದ್ರು. ಗಂಡೆಂಬೋ ಗಂಡುಹುಳ ಅಂತಃಪುರದಾಗ ಕಾಲಿಡಬಾರದಂಥಾ ವ್ಯವಸ್ಥಾ ಮಾಡಿದ್ದ ರಾಜ. ಮತ್ತೇನು, ಎಲ್ಲಾ ಹೆಂಗಸರಿಗೂ ಬೇಕು ಬೇಕಾದಂಥ ಸೀರಿ, ಕುಬುಸ, ಆಭರಣ ಹೀಂಗ ಏನೇನೋ ತರಶಿ ತರಶಿ ಕೊಡತಿದ್ದ. ಆದರ ಒಂದೇ ಒಂದ ಬಂದೋಬಸ್ತ....ಒಂದ ಗಂಡುದುಂಬಿ ಏನಾದರೂ ಅಂತಃಪುರದ ತ್ವಾಟದ ಹೂವಿನ ರಸಾ ಕುಡಿಲಿಕ್ಕೆ ಬಂದರೂ ಅದನ್ನ ಹಿಡಿದು ಕೊಂದಹಾಕಿಬಿಡಬೇಕಂತ ಆಜ್ಞಾ ಮಾಡಿದ್ದ. ಮತ್ತೇನಪಾ...., ಹೀಂಗ ವರ್ಸಾ ಹೋಗಿ ಮರುವರ್ಸಾ ಬಂತು. ದಿನಾ ಏನ ನಿಂದರತಾವೇನ? ವರ್ಸಾಕಾಲ ನನ್ನೂ ಕೇಳಂಗಿಲ್ಲ ನಿನ್ನೂ ಕೇಳಂಗಿಲ್ಲ, ಕಡೀಕ ಆ ಮಹಾ ರಾಜನ್ನೂ ಕೇಳಲಿಲ್ಲ. ವರ್ಸಾವರ್ಸಾ ಕಳದು, ಪಟ್ಟದ ರಾಣೀನ್ನ ಮದಿವ್ಯಾಗಿ ಹನ್ನೆರಡು ವರ್ಸಾದ್ವು, ರಾಣಿಗೆ ಮಕ್ಕಳಾಗಿಲ್ಲ. ಅರಮನಿಯು ಸಾವಿರದೊಂದು ಕಂಬ ಗೋಳು ಕಟ್ಟಿಸಿದಾಗ ಹೆಂಗ ಇದ್ವೋ ಪಟ್ಟದರಸೀನೂ ಹಂಗs ಇದ್‌ಬಿಟ್ಲು. ರಾಜಾಗ ಚಿಂತಿ ಹತ್ತು.

ನನ್ನ ವಂಸಾನ ಉದ್ಧಾರ ಮಾಡೂವಂಥಾ ಪುತ್ರರ ಹುಟ್ಟಲಿಲ್ಲಂತ ಚಿಂತೀ ವಳಗ ನವದ...., ದಾಡಿಬಿಟ್ಟ....ಅಲ್ಲೋ ಖೋಡಿ, ದಾಡಿ ಬಿಟ್ಟ ಕುಳೆ ಚಿಂತಿ ಬಗೀಹರೀತಾವೇನ....? ರಾಜನ ಚಿಂತಿ ಹಂಗs ಬೆಳಕೋತ ಹೋತು....

ಹಿಂಗs ಇರುತ್ತಿರುತ್ತ ಒಬ್ಬ ಋಷಿ ರಾಜ್ಯಕ್ಕ ಬಂದ. ಅವ ಕೇಳಿದ್ದೆಲ್ಲ ಕೊಡತಾನಂತ ವರ್ತಮಾನ ಹೊಂಟ್ವು, ನಾನೂ ಯಾಕ ಹಂಗಾರ ಅವನ್ನ ಕರದು ಪಾದಪೂಜಾ ಮಾಡಿ ಮಗನ್ನ ಪಡೀಬಾರ್ದು ಅಂತ ವಿಚಾರ ಮಾಡಿ ಆ ಋಷೀನ ಅರಮನೀಗೆ ಕರದ.

ನೀನೇ ಹೇಳೋ ಮಗನ...., ಹಿಂದಿನ ಕಾಲದ ರಾಜರೊಳಗ...., ಒಬ್ಬಗಾರ, ಒಬ್ಬಗಾರ ಋಷಿಗಳ ಸಹಾಯ ಇಲ್ಲದ ಮಕ್ಕಳನ್ನ ಹುಟ್ಟಸೂ ತಾಕತ್ತಿತ್ತ....? ಎಲ್ಲಾರ ವಂಶವೃದ್ಧಿಗೂ ಋಷಿಗೋಳೇ ಬೇಕು....ಹೂಂ....ಋಷಿಗೋಳು....

ಇರಲಿ, ಮುಂದ ಕೇಳು....ಈ ಋಷಿ ಬಂದಾವ ಹೆಂಗಿದ್ದ ಗೊತ್ತೇನು....s ಭಾರಿ ಚಂದಿದ್ದ....ಮಾರಿಒಳಗ ಫಳಾ ಫಳಾ ಹೊಳೆಯೂ ಕಣ್ಣ, ಕೆಂಚಗಿನ ಕಡ್ಡ, ಚೂಪುಮೂಗು....ಗದ್ದ....ಪುಣ್ಯವಂತ ನಾಕು ಹೆಂಗಸರ ಹೊಟ್ಟೆ ಹಸರಾಗಿಸೂದು ಬಿಟ್ಟು ಅದ್ಯಾಕ ಗಡ್ಡಾ ಬಿಟ್ಟು ಸನ್ನೇಶಿ ಆದ್ನೋ ಅಂತ ದಾರ್‍ಯಾಗ ಅಡ್ಡಬಿದ್ದ ಹೆಂಗಸರ ಎದೀ ಹೇಳಬೇಕು...., ಹಂಗಿದ್ದ. ಹೂಂ, ಬಂದಾಂವ ರಾಜನ ಕಡೀಂದ ಪಾದಪೂಜಾ ತೊಗೊಂಡ. ಭೋಜನಾತು. ರಾಜಾನ ಮನಶಿನ ಆಶಾ ಕೇಳಿದ ವ್ಯಾಲೆ, ಸ್ವಾಮಿ ತೂಗುಮಂಚದೊಳಗೇ ತಲಿ ಅಲ್ಲಾಡಿಸಿದ. ಗಡ್ಡ ನೀವಿಕೊಳ್ತ, "ಎಲ್ಲಿದ್ದಾಳ ನಿನ್ನ ರಂಭಿ....?, ಪಟ್ಟದರಶಿ ಕಾಣಿಸಲೇ ಇಲ್ಲಲ್ಲ...." ಅಂದ.

ರಾಜಾ ಬ್ಬೆಬ್ಬೆಬ್ಬೆ....ಅಂದ....ತಬ್ಬಿಬ್ಬಾದ ಋಷಿ ಮತ್ತೊಮ್ಮೆ ಗರ್ಜಿಸಿದ. "ಪೈರು ಕೊಡೋ ಭೂಮೀನ ನೋಡಲಾರದ ಬೀಜಾ ಹೆಂಗ ಕೊಡೋದೋ, ಮೂರ್ಖ.... ಕರಿ, ನಿನ್ನ ಪಟ್ಟದರಶಿನ್ನ...."

ತನ್ನ ಪಟ್ಟದರಶಿ, ಗಂಡದುಂಬಿ ಕೂಡ ಕಾಲಿಡದಂಥ ಅಂತಃಪುರದಾಗಿನ ಅರಗಿಣಿ, ನಿಮ್ಮನ್ನ ನೋಡಿದರ ಹೆದರತಾಳಂತ. ಬೀಜಾನ ತನ್ನ ಹತ್ತಿಲೇ ಕೊಟ್ಟರ ತಾನೇ ಒಯ್ದು ಅಕೀಗೆ ಕೊಡತೇನಂದ. ಮುನಿ ಇದ್ದಾಂವ ಗಹಗಹಿಸಿ ಗಹಗಹಿಸಿ ನಕ್ಕಿಬಿಟ್ಟ....

"ಮೂರ್ಖ, ಕರಿ ನಿನ್ನ ಪಟ್ಟದರಶಿನ್ನ....ನಾವು ವರಾನ ಕೈಯ್ಯಿಂದ ಕೊಡಾವ್ರು ಮತ್ತು ಕೊಡೂ ಮುಂದ ಇರಬಾರದು....ಕಡೀಕೆ ನೀನೂ ಕೂಡ. ಒಂದೇ ಒಂದು ಜ್ಯಾಡರ ಹುಳ ನಾವು ವರ ಕೊಡೊವನ್ನ ನೋಡಿದ್ದೇ ಆದರ ನಿನಗ ಮಗಾ ಹುಟ್ವದಿಲ್ಲ. ನಾವು ಮಹಾನ್ ಮಹಿಮಾಶಾಲಿ ಋಷಿಗೋಳು....ನಮ್ಮ ಮಹಿಮಾ ನಿನಗೊತ್ತಿಲ್ಲ....ಶಾಪ ಕೊಟ್ಟೇನು ತಡ ಮಾಡಿದ್ಯಂದ್ರ.... ಕರೀ ನಿನ್ನ ಪಟ್ಟದರಶೀನ...." ಅಂದ.

ರಾಜಾ ಅಂತಃಪುರಕ್ಕೆ ಹೋಗಿ ಪಟ್ಟದರಶೀನ್ನ ಕರಕೊಂಡು ಬಂದು ಋಷಿಜೋಡಿ ಏಕಾಂತದಾಗ ಬಿಟ್ಟ. ಅದೇನು ಮಹಿಮಾ ಅಂತೀದಿ, ವರಾಕೊಟ್ಟ ಒಂಭತ್ತನೇ ತಿಂಗಳಕ್ಕೆ ಒಂದು ಕೂಸು ಹುಟ್ಟಿತು. ಎಂಥಾ ಕೂಸು

ಅಂತೀದಿ....ಮುಗಿಲಾಗಿನ ಚಂದ್ರಮಾ ಕೂಡ ನಾಚಬೇಕು ಅಂಥಾಕೂಸು. ಕೂಸು ಹುಟ್ಟಿದ ಕೂಡಲೆ ಅರಮನಿಯಿಂದ ಹೊರಗ ಹೊಂಟ ಖುಷಿ ಬಂದವರಾ ಕೊಟ್ಟ.

"ಈ ಹುಡಗಿ ನಕ್ಕರ ಮುತ್ತು ಉದರಲಿ".... ಮತ್ತೊಮ್ಮೆ ವಿಚಾರ ಮಾಡಿ, "ಅತ್ತರ, ಎಲ್ಲೆಲ್ಲಿ ಇಕೀಂದು ಕಣ್ಣೀರಹನಿ ಬೀಳತಾವೋ ಅಲ್ಲಲ್ಲಿ ನೆಲಾ ಸ್ಮಶಾನ ಆಗ್ಲಿ. ಒಂದಕಾಳೂ ಆ ನೆಲದಾಗ ಬೆಳೀದಿರ್ಲಿ...." ಅಂತ್ಹೇಳಿ, ದಂಡಾಕವುಂಡಲಾ ತಗೊಂಡು ಹೊಂಟ್ಹೋದ.

ಹೀಂಗ್ಹ ದಿನಾ ಕಳದ್ವು....ರಾಜಕುಮಾರಿ ದೊಡ್ಡಾಕ್ಯಾದ್ಲು. ಬೆಳೀಬೆಳೀತಿದ್ರೂ ರಾಜಕುಮಾರೀದು ಒಂದೇ ಒಂದು ಕೊರತಿ. ಮಾತನಾಡತಿದ್ದಿಲ್ಲ, ನಗತ್ತಿದ್ದಿಲ್ಲ.... ಅಳೂದೂ ಇರಲಿಲ್ಲ. ರಾಜಾಗ ಮತ್ತ ಚಿಂತಿ ಹತ್ತು. ಇಕೀ ನಕ್ಕಾಗೆಲ್ಲ ಉದರೂ ಮುತ್ತನ್ನೆಲ್ಲ ಕೂಡಿಟ್ಟು ಶ್ರೀಮಂತನಾಗಬೇಕು ಅಂತ ಪಳಾನ್ ಹಾಕಿದ್ದ. ಆದ್ರ ಈ ಹುಡುಗೀನೋ ನಗಂಗಿಲ್ಲ ಅಂದರ ನಗಂಗಿಲ್ಲ. ರಾಜಾನೂ ಬೇಕಾದಷ್ಟು ಉಪಾಯ ಮಾಡ್ದ. ತಾನೂ ಅಕೀಮುಂದ ಗಹಗಹಿಸಿ ನಕ್ಕ, ವಿದೂಷಕರನ್ನ ಕರೆಶಿದ.... ಕಡೀಕೆ ಹುಡುಗಿಗೆ ಕಚ್ಚಂಗುಳಿ ಇಡಿಸಿದ. ಊಹುಂ ಅಂದರ ಊಹುಂ. ಹುಡಗಿ ನಗಲೇ ಇಲ್ಲ. ಹಾಳಾಗಿ ಹೋಗಲಿ ಅಂತ ರಾಜಾನೂ ಸುಮ್ನಾದ.

ಒಂದದಿನ ಬೆಳ್ಳಂಬೆಳಿಗ್ಗ ರಾಜಕುಮಾರಿಯು ತ್ವಾಟದಾಗ ಚನ್ನಂಗಿ ಹೂವು ಭಿರ್ರಂತ ಬಿರದ್ವು. ತ್ವಾಟದ ತುಂಬಾ ಕೆಂಪು, ಕೆಂಪು ಹೂವು....ಅಂಗಳದಾಗ ರಕ್ತಾ ಚಲ್ಲಿದಂಗಿರಬೇಕು ಅಂಥಾ ಕೆಂಪು....ತಾಜಾತಾಜಾ ರಕ್ತ. ಅಂದಿನಿಂದ ರಾಜಕುಮಾರಿಯು ಚಿಂತಿ ಇನ್ನೂ ಹೆಚ್ಚಾತು. ರಾತ್ರೋರಾತ್ರಿ ತ್ವಾಟದೊಳಗ ಚಂದ್ರಮನ್ನ ದಿಟ್ಟಿಸ್ತ ಕುಂತು ಬಿಡ್ತಿದ್ದಳು....ಇಷ್ಟು ದಿನ ಅಳದವಳು ಈಗೀಗ ಹುಣ್ಣಿವಿ ರಾತ್ರಿ ಹೊತ್ತು ಹನ್ನೆರಡರ ಸಮಯ ಹೊರಗ ಬಂದು ಬೆಳದಿಂಗಳೊಳಗ ಕುಂತಾಗೆಲ್ಲ ಚಂದ್ರಮನಂಥಾ ಗಲ್ಲದ ಮ್ಯಾಲೆ ದಳದಳಾ ಕಣ್ಣೀರು ಹರೀತಿದ್ವು.... ಹುಡುಗಿ ಚಿಂತಿವಳಗಾ ನವದ್ಲು.

ರಾಜಾಗ ಹೊಸ ಚಿಂತಿ ಹತ್ತು. ಯಾಕಂದರ ರಾಜಕುಮಾರಿ ಅತ್ಹಂಗೆಲ್ಲ ರಾಜ್ಯದಾಗ ಕ್ಷಾಮ ಹೆಚ್ಚಾಗೊತ ಹೋತು. ಶಾಪಾನೇ ಹಂಗಿತ್ತಲ್ಲ. ಆಕೀ ಕಣ್ಣೀರು ಬಿದ್ದಕಡೆ ನೆಲಾ ಸ್ಮಶಾನ ಆಗತದ ಅಂತ. ಇಕೀ ಅಳೂದು ನಿಲ್ಸಿ ನಗಬೇಕಂತ ರಾಜಾನೂ ವಿಶ್ವಪ್ರಯತ್ನ ಮಾಡಿದ. ಕಡೀಕೆ ಅಳೂದು ನಿಲ್ಲಿಸ್ಲಿಲ್ಲ ಅಂದರ ಊಟಾ ಹಾಕಂಗಿಲ್ಲ ಅಂದ, ಉಪವಾಸ ಕೆಡವಿದ. ಆದರ ಇದೆಲ್ಲಕ್ಕೂ ಅಳು ಬಗ್ಗಲೇ ಇಲ್ಲ. ಹಂಗ ಕಾಲುವಿ ಕಾಲುವಿಯಾಗಿ ರಾಜಕುಮಾರಿದು ಕಣ್ಣೀರು ರಾಜ್ಯದಾಗೆಲ್ಲ ಹರೀತು. ಹರದಲ್ಲೆಲ್ಲ ನೆಲಾ ಸ್ಮಶಾನ ಆತು. ರಾಜನಂತೂ ಕಂಗೆಟ್ಟ. ಇದೆಲ್ಲ ದುಃಖಾನ ಕೊಳ್ಳಿಗೆ ಕಟ್ಟಿಗೊಂಡೆ "ಮುಂಗ್ಯಾನ ಮಗನ, ಸೂಳೀಮಗನ ಎಂಥಾ ವರಾ ಕೊಟ್ಯಲೇ...." ಅಂತ ವರಾಕೊಟ್ಟ ಖುಷೀನ್ನ ಬೈಯ್ದ. ಇದಕ್ಕಿಂತ ಮಕ್ಕಳಿಲ್ಲದಿರೂದೆ ಛಲೋ ಅಂದ. ಕಡೀಕೆ ಒಂದದಿನ ಬ್ಯಾಸರಾಗಿ ರಾಜಕುಮಾರೀನ ಏಳು ಅಂತಸ್ತಿನ ಕಬ್ಬಿಣದ ಕಟ್ಟಡದ ಮ್ಯಾಲಿನ ಅಂತಸ್ತಿನೊಳಗ ಬಂದೋಬಸ್ತ ಮಾಡಿಟ್ಟ.

ಹೀಂಗ ದಿನಾ ದಿನಾ ಹೋಗತಿದ್ವು....ನಮ್ಮ ರಾಜಕುಮಾರಿಗೆ ಬಹಾಳ ಉದ್ದ ಕೂದಲಿದ್ವು....ಮಾರೋ ಮಾರೋ ಮಾರುದ್ದಾ ಬಂಗಾರದಂಥಾ ಕೂದಲ.... ಬಿಸಿಲಾ ಮಿರಿಮಿರಿ ಮಿಂಚೂ ಬಂಗಾರದಂಥಾ ಕೂದಲ.... ದಿನಾ ಅಕೀ ಕೂದಲಾ ಹಿಕ್ಕಿಕೋತಾ ಸೆರಮನಿ ಕಿಡಕ್ಯಾಗ ನಿಂದರತಿದ್ಲು. ಒಂದದಿನ ಹಿಂಗಾತು. ಅಕಿ ಕೂದಲಾ ಹಿಕ್ಕಿಕೋತ ನಿಂತಿರುವಾಗ ಒಂದ ದೊಡ್ಡ ಕೂದ್ಲಾ ಹಾರಿ ಹಾರಿ ಹೋಗಿ ಊರಾಚಿಗಿನ ನದ್ಯಾಗ ಬಿತ್ತು. ಅದು ಅಲ್ಲಿಂದಲೇ ತೇಲ್ಕೊಂತ ತೇಲ್ಕೊಂತ ಹೋಗಿ ಒಬ್ಬ ಗೊಲ್ಲನ ಕೈಯಾಗ ಸಿಕ್ತ್ಯು. ಅವ ಅಲ್ಲಿ ದನಕ್ಕ ನೀರು ಕುಡಿಸಾಕ ಬಂದಿದ್ದ. ಅವಾಗ ಆ ಕೂದಲನ್ನ ನೋಡಿ, ಈ ಕೂದಲ ಮಾಲಕಿನ್ನ ನೋಡಬೇಕಂತ ಅನ್ನಿಸ್ತ್ಯು. ಈ ಒಂದ ಕೂದಲ ಇಷ್ಟು ಸುಂದರ ಇರಬೇಕಾದರ ಇದರ ಮಾಲಕಿನ್ನ ಎಷ್ಟು ಛಂದ ಇರಬೇಕು ಅಂತ ಮನಶಿನಾಗ ಮುಂಡಿಗಿ ತಿಂದ ಚಿಗುರು ಮೀಶಿ ಹುರಿ ಮಾಡ್ಕ್ಯಂಡ.... ಪಿಳ್ಳಂಗೋವಿ ಕೈಯ್ಯಾಗ ಹಿಡಕೊಂಡ....ಆ ಕೂದಲ ತೇಲಿಬಂದ ದಿಕ್ಕಿನೊಳಗ್ಹ ಹೊಂಟ. ಇತ್ತಲಾಗ ರಾಜಕುಮಾರಿ ಕ್ವಾಣಿ ಒಳಗೆ ಮಂಚದಾಗ ಮಲಗಿದ್ಲು, ರಾಜ ಇಕೀಗೇ ಅಂತ ಕಾಡಿಂದ ಹಿಡಿಸಿತರಿಸಿದ್ದ ಗಿಳಿ ಅಲ್ಲಿ ಪಂಜರದಾಗ ನಿಟ್ಟುಸಿರಿಡುತ್ತ ಇತ್ತು....ಇದ್ದಕ್ಕಿದ್ದ ಹಂಗ ರಾಜಕುಮಾರಿ ಎದ್ದಕೂತ್ಲು....ಕಿವಿ ನಿಮಿರಿಸಿ ಕೇಳಿದಳು ....ಎದ್ದು ಮಂಚದಿಂದಿಳಿದು ಬಂದು ಕಿಡಿಕ್ಯಾಗ ನೋಡಿದಳು. ಕಿವಿಯಾರೆ ಕೇಳಿದ್ಲು. ದೂರದಾಗೆಲ್ಲೋ ಅಕಿ ಎಂದೂ ಕೇಳಿರದ ಮಧುರ ಅಂದರ ಅತಿ ಮಧುರ

ದನಿ ಕೇಳಾಕ ಹತ್ತು. ನಮ್ಮ ಚಿಗುರು ಮೀಸಿ ಹುಡುಗ ಪಿಳ್ಳಂಗೋವಿ ಊದಿಕೋತ ಬಂದ. ಬಂದೇ ಬಂದ.... ಬಂದೇಬಿಟ್ಟ.....ನಮ್ಮ ಹುಡುಗ ನಿಂತಿದ್ದ ಗೋಪುರದ ಕೆಳಗೆ ಬಂದ. ಕಾವಲುಗಾರರೆಲ್ಲ ಆ ನಾದಕ್ಕ ಮರುಳಾಗಿ ಕಡೆದ ಚಿತ್ರಗಳಂಗ ನಿಂತ್‌ಬಿಟ್ರು. ರಾಜಕುಮಾರಿ ನೋಡೇ ನೋಡಿದಳು....ಆ ನೀಲಿನೀಲಿ ಕಣ್ಣುಗಳ ಒಳಗೆ ವರ್ಷಾನುಗಟ್ಲೆ ದಾಹ ಇತ್ತು. ಇಗಾ, ಆ ಆಕಾಶದೊಳಗ ಹೊಳೀಲಿಕ್ಕತ್ತಾವಲ್ಲ ಎರಡ ಚುಕ್ಕಿ ಅದರ್ಹಂಗ ಫಳಾ ಫಳಾ ಹೊಳ್ದವು....ಹುಡುಗ ತನ್ನನ್ನ ಅಂತಸ್ತಿನ ಮ್ಯಾಲೆ ಕರಕೋ ಅಂತ ಸನ್ನೆ ಮಾಡಿ ಕೇಳಿದ. ಹುಡುಗಿ ಲಗುಬಗಿ ಒಳಗ ಓಡಾಡಿದಳು. ಹೆಂಗ ಕರಕೊಳ್ಳೊದು ಅಂತ ಚೂಪುಗದ್ದಾ ಕೆರಕೊಂಡ್ಳು. ಏಳ ಅಂತಸ್ತು ಅಂದರ ಸುಮ್ಮನಾದೀತ....ಹುಡುಗ ಕೆಳಗೆ ನಿಂತವ ಸನ್ನಿ ಮಾಡೇ ಮಾಡಿದ. ಹುಡಿಗಿಗೆ ಏನೋ ಹೊಳೀತು. ಕಿಡಕಿಯ ಹತ್ರಕ್ಕ ಹೋಗಿ ತನ್ನ ಮಾರೋಮಾರೋಮಾರು ಬಂಗಾರದ ಬಣ್ಣದ ಕೂದಲನ್ನ ಹೊರಗ ಇಳಿಬಿಟ್ಳು. ಹುಡುಗ ಅದನ್ನ ಹಿಡಕೊಂಡು ಸವಕಾಶ ಸವಕಾಶ ಹತ್ತಿ ಮ್ಯಾಲಕ್ಕ ಬಂದ.

ಹತ್ತಿರದಾಗ ನಿಂತು ಹುಡುಗಿನ್ನ ನೋಡಿದ. ಇನ್ನೂ ಹತ್ತಿರಕ್ಕ ಹೋದ, ಮತ್ತೂ ಹತ್ತಿರಕ್ಕ–ಗಲ್ಲಾ ಮುಟ್ಟಿದ ಭುಜಾ ಸವರಿದ...ಹುಡುಗಿ ಹಂಗೇ ಇದ್ದಳು..."ನಿಂಗೇನು ಮಾತು ಬರಾಣಿಲ್ಲೇನು....?" ಎಂದು ಕೇಳಿದ. ಹುಡುಗಿ ಹಂಗೇ ಇದ್ದಳು.

"ನಗಾಕ ಬರಾಂಗಿಲ್ಲೇನು ?" ಅಂದ.

ಹುಡುಗಿ ಹಂಗೇ ಇದ್ಲು.

"ನಿನ್ನ ಕೂದಲ ಭಾಳ ಚಂದೈತಿ....ಕಣ್ಣುಮೂಗು, ಎಲ್ಲಾ ಭಾಳ ಚಂದೈತಿ" ಅಂದ.

ಊಹೂಂ....ಹುಡುಗೀದು ಮಾತಿಲ್ಲ ಕತಿಯಿಲ್ಲ ನಗುವಿಲ್ಲ ಏನಿಲ್ಲ. ಹುಡುಗ ಕಡೀಕೆ ಬ್ಯಾಸತ್ತು ಹುಡುಗಿಯ ಭುಜದಸುತ್ತಾ ಕೈಹಾಕಿ....

"ಏ ನಾಚಿಗೋ ಬ್ಯಾಡೋ ಸಿದ್ಲಿಂಗ, ಕತೀನ ಇಲ್ಲೆ ಮುಗಸ್ತೀನಿ, ಒಂದಿಷ್ಟು ಉಳಿದದ" ಅಜ್ಜಿ, ರಸಿಕತೆಯ ನಗುನಕ್ಕು ನನ್ನ ಕಿವಿಯ ಬಳಿ ಪಿಸುಗುಟ್ಟಿತು.

ಹುಡುಗಿಯ ಭುಜದಸುತ್ತಾ ಕೈಹಾಕಿ ತುಟಿಗೆ ತುಟಿ ಹಚ್ಚಿದ....ಏನು ಮಾಯವೋ ಏನಂತೀ? ಹುಡುಗಿ ನಕ್ಕಳು, ಗಹಗಹಿಸಿ ನಕ್ಕಳು....ಏಳಂತಸ್ತಿನ ಕಟ್ಟಡ ಕುಸಿದು ಬೀಳೂಹಂಗ. ಹುಡುಗ ದಂಗಾದ, ಆಕಿ ನಕ್ಕಂಗೆಲ್ಲ ಬಾಯೊಳಗಿಂದ ಮುತ್ತುಗೋಳು ಉದುರಿ ಉದುರಿ ಕೆಳ ಅಂತಸ್ತಿನ ತನಕಾ ಹೋದ್ವು. ರಾಜ್ಯಸಭಾದೊಳಗ ಚಿಂತಾಕ್ರಾಂತನಾಗ ಕುಂತಿದ್ದ ರಾಜನ ಕಾಲ ಬುಡದ ತನಕಾ ಹೋದ್ವು. ರಾಜಭಟರು ಬಂದು ಅವಸರದಾಗ ಸುದ್ದಿ ಒಪ್ಪಿಸಿದ್ರು....

"ಮಹಾಸ್ವಾಮಿ, ರಾಜಕುಮಾರಿ ನಗಲಿಕ್ಕೆ ಹತ್ಯಾರ" ಅಂತ. ರಾಜಾ ಜಾರುಪಂಚೀನೂ ಗಮನಿಸದ ಓಡೋಡಿ ಬಂದ....ಮೆಟ್ಟಲ ಮ್ಯಾಲೆ ಮೆಟ್ಟಲೂ ಹತ್ತಿದ. ರಾಜಕುಮಾರಿ ನಗೀ ಕೇಳಾಕ ಹತ್ತಿತು....ಗುಡ್ಯಾಗಿನ ಗಂಟೀ ಬಾರಿಸಿದಂಥಾ ನಗಿ. ಎದುರಿಗೆ ನಿಂತಾನ ಹುಡುಗ ದಿಗ್ಭ್ರಾಂತನಾಗಿ. ವರ್ಷಾವರ್ಷಾ ಕೂಡಿಟ್ಟ ನಗೀನೆಲ್ಲ ಹೊರಗ ಚೆಲ್ಲಲಿಕ್ಕೆ ಹತ್ಯಾಳ ಹುಡುಗಿ. ರಾಜಾಗ ಆಶ್ಚರ್ಯಾತು. ಈ ಗಂಡು ಇಲ್ಲೆಹೆಂಗ ಬಂದ ಅಂತ ಆಶ್ಚರ್ಯಾತು. ಆದರೂ ಹುಡಗಿಯ ರೋಗಾ ಕಡಿಮಿ ಮಾಡಿದ್ನಲ್ಲಂತ ಸಮಾಧಾನಾಗಿ—

"ಏನ್ ಮದ್ದ ಕೊಟ್ಟಾ, ನಮ್ಮ ಹುಡುಗಿಗೆ....? ಹಿಂಗ ನಗಲಿಕ್ಕೆ ಹತ್ಯಾಳ" ಅಂತ ಕೇಳಿದ.

ಹುಡುಗ ಗಾಭರ್ಯಾದ. ಹೇಳಿಕೇಳಿ ದೊಡ್ಡೋರ ಸಾವಾಸ....ನಾ ಯಾಕ ಇಲ್ಲಿ ಬಂದೆ ಅಂತ ತಬ್ಬಿಬ್ಬಾಗಿ ತೊದಲಿದ....

"ನಾ ಯೇನೂ ಔಷಧಾ ಕೊಟ್ಟಿಲ್ರಿ....ನಾ ಕೊಟ್ಟದ್ದು ....ಮತ್ತೆ ನಾ ಕೊಟ್ಟದ್ದು....ಒಂದೇ ಒಂದು....ಒಂದು ಮುತ್ತು...."

ರಾಜಾಗ ಮ್ಯಾಲಿಂದು ಕೆಳಗಿಂದು ಹೊಳೀಲಿಲ್ಲ.... ಕಕ್ಕಾಬಿಕ್ಕಿ ಆದ.... "ಒಂದ್ ಮುತ್ತಿಗೆ ಇಷ್ಟೆಲ್ಲಾ ಮುತ್ತ....? ಒಂದ್ ಮುತ್ತಿಗೆ ಸಾವಿರಲ್ಲ, ನೂರಲ್ಲ, ಕೋಟ್ಯೆಲ್ಲ....ಇಷ್ಟೆಲ್ಲಾ ಮುತ್ತ....?"

....ಕತೆಯನ್ನು ಹೇಳಿ ಮುಗಿಸಿದ ಅಜ್ಜಿ ತನ್ನಷ್ಟಕ್ಕೆ ತಾನೇ ಸ್ವಗತದಲ್ಲೆಂಬಂತೆ ಮತ್ತೊಮ್ಮೆ ಆ ಮಾತನ್ನು ಮೆಲುಕು ಹಾಕಿತು.

"ಒಂದ್ ಮುತ್ತಿಗೆ....ಎಷ್ಟೊಂದು ಮುತ್ತು ?!".... ಒಮ್ಮೆ ದೀರ್ಘವಾಗಿ ಆಕಳಿಸಿ....'ಇಲ್ಲಿಗೆ ಕತೀ ಮುಗೀತಪಾ ಸಿದ್ಲಿಂಗ....ಹೊತ್ತಾತು ಮಲಗಹೋಗು' ಅಂತ ಅವಸರಿ

13 ನೇ ಪುಟಕ್ಕೆ

# ಎಲ್ಲಾ ಮಗಳ ಮದುವೆಗಾಗಿ....

ಒಂದೂರಲ್ಲಿ ಒಬ್ಬ ಬಡನ. ಅವನಿಗೆ ಮೂವರು ಹೆಣ್ಣು ಮಕ್ಕಳು. ಮೊದಲ ಮಗಳ ಮದುವೆಗೆ ಆತ ಒಂದು ಮೂತ್ರಪಿಂಡ ಮಾರಿದ. ಎರಡನೇ ಮಗಳ ವರದಕ್ಷಿಣೆಗೆ ತನ್ನೆರಡು ಕಣ್ಣುಗಳ ಮಾರಿದ. ಮೂರನೇ ಮಗಳ ಮದುವೆಗೆ ಏನೂ ಉಳಿದಿರಲಿಲ್ಲ. ತನ್ನ ಉಳಿದೊಂದು ಮೂತ್ರಪಿಂಡವನ್ನು ಮಾರಿ, ನೆಗೆದು ಬಿದ್ದ!

ಸದ್ಯಕ್ಕೆ, ಇದೊಂದು ಕಟ್ಟು ಕತೆ, ಆದರೆ ಈ ಕತೆ ಅದಾಗಲೇ ವಾಸ್ತವದ ಹಾದಿ ಹಿಡಿದಿದೆ. ಬಾಂಬೆಯ ಉಲ್ಲಾಸನಗರದಲ್ಲಿರುವ ಗೋವಿಂದರಾಮ ಮೀರ್‌ಚಂದಾನಿ ಅಡಿಗೆ ಸೋಡಾ ತಯಾರಿಸುವ ಪುಟ್ಟ ಯೂನಿಟ್‌ನ ಮಾಲೀಕ. ಆತನಿಗೆ ಐದು ಜನ ಗಂಡು ಮಕ್ಕಳು, ನಾಲ್ಕು ಹೆಣ್ಣು ಮಕ್ಕಳು. ಈತ ಇದೀಗ ತನ್ನ ಎರಡನೇ ಮಗಳ ಮದುವೆಗಾಗಿ ತನ್ನ ಒಂದು ಮೂತ್ರಪಿಂಡ ಮಾರಲು ಹೊರಟಿದ್ದಾನೆ. ಆತನ ಈ ನಿರ್ಧಾರ ಒಂದೆಡೆ ಸ್ತ್ರೀವಾದಿ ಸಹೃದಯಿಗಳ ಬೆಚ್ಚಿ ಬೀಳಿಸಿದರೆ, ಮತ್ತೊಂದೆಡೆ ಕೊಂಡುಕೊಳ್ಳಲು ಉತ್ಸುಕರಾದ ಜನ 'ಕ್ಯೂ' ಬೆಳೆಸಿದ್ದಾರೆ.

ಮೀರ್‌ಚಂದಾನಿಯ ಮೊದಲ ಮಗಳು 23 ವರ್ಷದ ಉಷಾ, ಆರು ತಿಂಗಳ ಹಿಂದೆ ಸತ್ತಳು. ಹತ್ತಿರದ ಸಂಬಂಧಿ ಹುಡುಗನೊಡನೆ ಆಕೆಯ ವಿವಾಹ ನಿಶ್ಚಯವಾಗಿತ್ತು. ನಿಶ್ಚಿತಾರ್ಥದ ಸಮಯದಲ್ಲಿ 25,000 ರೂ. ವರದಕ್ಷಿಣೆ ಕೊಡುವುದಾಗಿ ಮಾತು ಕೊಟ್ಟದ್ದು, ಆತನ ಕೈ ಮೀರಿತ್ತು. ಮದುವೆಗೆ ಮೊದಲೇ ಹುಡುಗನ ಬೇಡಿಕೆ ಏರುತ್ತಲೇ ಹೋದವು. ತನ್ನ ಬೇಡಿಕೆಗಳನ್ನೆಲ್ಲ ತೀರಿಸುವಂಥಾ ಸಿರಿವಂತನಲ್ಲ ಮೀರ್‌ಚಂದಾನಿ ಎಂದು ತಿಳಿದಾಗ, ಹುಡುಗ ಮತ್ತೊಂದು ಹುಡುಗಿಯ ಆರಿಸಿಕೊಂಡ, ನೋವಿನಲ್ಲಿ ಉಷಾ ಕಣ್ಣು ಮುಚ್ಚಿದಳು.

ಈ ಸಾವು, ಈ ತಂದೆಗೆ ಗಂಡಿನ ಲೋಭ, ದುರಾಸೆ, ಸ್ವಾರ್ಥ ಇಂಥ ಮುಖಗಳ ತೋರಿಸಲಿಲ್ಲ. ವರದಕ್ಷಿಣೆಯ ಕರಾಳತೆಯ ತಿಳಿಸಲಿಲ್ಲ. ಇಂಥ ಗಂಡಿಗೆ ತಾನೆಷ್ಟೇ ಸುರಿದು ಮದುವೆ ಮಾಡಿದ್ದರೂ ಮಗಳು ಸುಖವಾಗಿರುತ್ತಿರಲಿಲ್ಲ ಎಂದೂ ಆತನ ವಿವೇಕಕ್ಕೆ ಹೊಳೆಯಲಿಲ್ಲ. ತನ್ನ ಮಗಳಿಗಷ್ಟು ಓದಿಸಿ ಸ್ವತಂತ್ರಳಾಗಿ ಮಾಡಬೇಕಿತ್ತು ಎಂಬ ಯಾವ ನಿಲುವುಗಳನ್ನೂ ಆತ ತಳೆಯಲಿಲ್ಲ. ಬದಲಾಗಿ ಈ ಘಟನೆ ನೊಂದ ತಂದೆಗೆ ವಿಚಿತ್ರ ತರ್ಕಗಳ ಹೇಳಿಕೊಟ್ಟಿತು. ತನ್ನಲ್ಲಿ ಸಾಕಷ್ಟು ಹಣವಿದ್ದಿದ್ದರೆ, ಬಹುಶಃ ತನ್ನ ಮಗಳ ಬದುಕನ್ನು, ಸುಖವನ್ನು ಕೊಂಡುಕೊಳ್ಳಬಹುದಿತ್ತು ಅನಿಸತೊಡಗಿತು.

ಇದೀಗ ಎರಡನೇ ಮಗಳಿಗೆ ವರ ಬರತೊಡಗಿದೆ. ಮೊದಲ ಮಗಳ ಕತೆಯ ಪುನರಾವರ್ತನೆ ಆತನಿಗೆ ಬೇಕಿಲ್ಲ. ಒಂದು ಮೂತ್ರಪಿಂಡಕ್ಕೆ ಮಾರುಕಟ್ಟೆಯಲ್ಲಿ 50 ರಿಂದ 60 ಸಾವಿರ ರೂ. ಬರುವುದೆಂದು ಗೊತ್ತು. ಧಂಡಿಯಾಗಿ ದಕ್ಷಿಣೆ ಕೊಟ್ಟು ಮಗಳ ಮದುವೆ ಮಾಡುವ ಕನಸು ಹೊತ್ತಿದ್ದಾನೆ.

ಇಲ್ಲಿಯವರೆವಿಗೂ ಮಾವನ ಮನೆಯನ್ನಷ್ಟೇ ತೊಳೆಯುತ್ತಿದ್ದ 'ಅಳಿಯ' ಇದೀಗ ಮಾವನನ್ನೇ ಕಬಳಿಸಲಿದ್ದಾನೆ. ಅತ್ಯಂತ ಶೋಚನೀಯವೆಂದರೆ, ಮಗಳು ತಂದೆ ಮೂತ್ರಪಿಂಡ ಮಾರಿಯಾದರೂ ತನ್ನ ಮದುವೆ ಮಾಡಲಿ ಎಂದು ಒಪ್ಪಿದ್ದಾಳೆ. ಸ್ವಂತ ದುಡಿಮೆಯೋ, ಪ್ರೇಮ ವಿವಾಹವೋ ಅವಳು ಕನಸಿನಲ್ಲೂ ಎಣಿಸಲಾರಳು. ಅವಳು ಬೆಳೆದು ಬಂದ ವಾತಾವರಣ, ಅವಳಲ್ಲಿ ಹಿಡಿಹಿಡಿಯಾಗಿ ತುಂಬಿರುವ ಸಂಪ್ರದಾಯದ ತತ್ವಗಳೇ ಹಾಗಿವೆ. ಮಾದರಿ ಮಗಳಂತೆ ಗಂಡನನ್ನು ಹುಡುಕುವ, ತನ್ನ ಭವಿಷ್ಯವನ್ನು ನಿಲಿಸುವ ಜವಾಬ್ದಾರಿ, ಒದ್ದಾಟಗಳನ್ನು ತನ್ನ ತಂದೆಗೇ ಬಿಟ್ಟಿದ್ದಾಳೆ. ತಂದೆಯ ವಯಸ್ಸು, ಆರೋಗ್ಯ ನೋಡಿದರೆ ಈ ಆಪರೇಷನ್ ತುಂಬಾ ಅಪಾಯಕಾರಿ. ಮುದಿ ಮೂತ್ರಪಿಂಡಕ್ಕೆ ಬೆಲೆಯೂ ಕಡಿಮೆ. ಹಾಗೆಂದು ಕತೆ ಇಲ್ಲಿಗೇ ಮುಗಿಯುವುದಿಲ್ಲ. ನಿರೀಕ್ಷಿತ ಹಣ ದೊರೆಯದಿದ್ದರೆ, ಮೀರ್‌ಚಂದಾನಿಯ ಎರಡನೇ ಮಗ, ತನ್ನ ಮೂತ್ರಪಿಂಡ ನೀಡಲು ಮುಂದಾಗಿದ್ದಾನೆ.

ಈ ಎಲ್ಲ ವಿಪರೀತಗಳಿಗೆ ಕಾರಣವಾಗಿ ಕಾಣುವುದು

‘ವರದಕ್ಷಿಣೆ’. ಮೂಲದಲ್ಲಿ ಯಾವ ಕಾರಣಕ್ಕೆ ಯಾವ ರೂಪದಲ್ಲಿ ಹೇಗೆ ಈ ವರದಕ್ಷಿಣೆ ಹುಟ್ಟಿತು ಈಗ ಅಪ್ರಸ್ತುತ, ಇದೀಗ ಕಾಲದ ಗತಿಯಲ್ಲಿ ಅದು ತಳೆದಿರುವ ಕರಾಳ ರೂಪ ಮಾತ್ರ ಭಯಂಕರ. ಇಂಥ ವರದಕ್ಷಿಣೆ ಹೆಣ್ಣಿಗೆ ಆಸರೆಯಾಗಿ, ಭವಿಷ್ಯದ ಭದ್ರತೆಯ ಗಂಟಾಗಿಲ್ಲ. ನೇರ ಗಂಡಿನ ಕೈ ಸೇರುವ ಸ್ವತ್ತಾಗಿದೆ. ದಕ್ಷಿಣೆ ಕೂಡ ಅಪ್ಪನ ಆಸ್ತಿಯ ಆಳತೆಗೆ ತೂಗಿದ್ದಲ್ಲ. ಅನಕ್ಕೇ ಇಂದು ಮನೆ–ಮಠ ಮಾರಿದ್ದಲ್ಲದೆ ಮೂತ್ರಪಿಂಡಗಳನ್ನೂ ಮಾರಲು ಹೊರಟಿದ್ದಾರೆ. ಈ ವರದಕ್ಷಿಣೆಯ ಪಿಡುಗನ್ನು ಸದೆಬಡಿಯಲು ಕನ್ಯಾಪಿತೃಗಳು ತಮ್ಮ ಮಗಳ ಓದು–ವಿದ್ಯಾಭ್ಯಾಸ–ಕೆಲಸ–ಆರ್ಥಿಕ ಸ್ವಾವಲಂಬನೆಗೆ ಗಮನ ಹರಿಸಬೇರಾಗಿದೆ. ಹಾಗೆಯೇ ಹುಡುಗಿಯರು ಇಂಥಾ ಅಧ್ವಾನದ ಹಣದಾಸೆಯ ವಿವಾಹಕ್ಕಿಂತ ಕೌಮಾರ್ಯವೇ ವಾಸಿ ಎಂದು ಉಳಿಯಬೇಕಿದೆ. ಅದರ ಬದಲು ವರದಕ್ಷಿಣೆಯ ಬ್ರಹ್ಮರಾಕ್ಷಸನಿಗೆ ದೇಹವನ್ನು ಬಿಡಿಬಿಡಿಯಾಗಿ ಕತ್ತರಿಸಿ ಕೊಡುತ್ತಿದ್ದಾರೆ.

ಇದೇ ಹಿನ್ನೆಲೆಯಲ್ಲಿ ಮೊನ್ನೆ ಮೇ ತಿಂಗಳಲ್ಲಿ ದಿಲ್ಲಿಯಲ್ಲಿ ನಡೆದ ಘಟನೆ ನೆನಪಾಗುತ್ತದೆ. ಮತ್ತದೇ ಹೆಣ್ಣಿನ ‘ವಿವಾಹ’ ಪ್ರಶ್ನೆಯಾಗುತ್ತದೆ. ಆರು ವರ್ಷದ ಬಾಲೆ ‘ರೇಖಾ’, ಬಡಗಿ ರಾಧೇಶ್ಯಾಮ್ ಮತ್ತು ಆತನ ಹೆಂಡತಿ ಲಕ್ಷ್ಮಿಯ ಮಗಳು, ಸಣ್ಣ ಗಾಯವಾದ ರೇಖಾಳ ಕಾಲು ಅಪ್ಪ–ಅಮ್ಮನ ಅಲಕ್ಷ್ಯದಲ್ಲಿ ಕೀವು ತುಂಬಿ ಗ್ಯಾಂಗ್ರೀನ್ ಆಗಿ, ಬಲಗಾಲ ಕತ್ತರಿಸುವಲ್ಲಿಗೆ ಬಂದಿತು. ಒಂಟಿಕಾಲಿನ ಅಂಗವಿಕಲ ಮಗಳನ್ನು ಮುಂದೆ ಯಾರು ವಿವಾಹವಾಗುತ್ತಾರೆ ಎಂಬ ಪ್ರಶ್ನೆಗೆ, ಈ ಅಪ್ಪ–ಅಮ್ಮನಲ್ಲಿ ಒಂದೇ ಉತ್ತರವಿದ್ದಂತೆ ಕಾಣುತ್ತದೆ. ಆರು ವರ್ಷದ ಮುದ್ದು ರೇಖಾಳನ್ನು ರಾತ್ರಿ, ಉಣ್ಣೆ ಶಾಲಿನಲ್ಲಿ ತುರುಕಿ ಸುತ್ತಿ, ಜಮುನಾ ನದಿಗೆ ಎಸೆದು ಬಂದರು.

‘ಮಾತೃದೇವೋಭವ’, ‘ಪಿತೃದೇವೋಭವ’ ಎಂಬ ನಾಡಿನಲ್ಲಿ ಮೃತ್ಯುದೇವತೆಗಳಾದ ಈ ತಂದೆ–ತಾಯಿಯರನ್ನು ಬಯ್ಯೋಣವೆ, ಇಲ್ಲ ಹೆಣ್ಣಿನ ಬದುಕನ್ನು ಮದುವೆಯೊಡನೆ ಇನ್ನಿಲ್ಲದಂತೆ ಬೆಸೆದಿರುವ ನಮ್ಮ ಸಾಮಾಜಿಕ ವ್ಯವಸ್ಥೆಯನ್ನು ದೂರೋಣವೆ? ಒಂಟಿ ಕಾಲಿನಲ್ಲಿ ಗೆಜ್ಜೆ ಕಟ್ಟಿ ನೃತ್ಯವನ್ನೇ ಮಾಡುತ್ತಿರುವ ಸುಧಾಚಂದ್ರನ್ ಇರುವ ದೇಶದಲ್ಲೇ ಅಂಗವಿಕಲ ಮಕ್ಕಳಿಗೆ ಭವಿಷ್ಯವಿಲ್ಲೆಂದು ಸಾವಿಗೆ ದೂಡುವ ಇಂಥಾ ಪ್ರಸಂಗಗಳು ಎಷ್ಟು ವಿಪರ್ಯಾಸ?

ಅಪ್ಪನ ಮೂತ್ರಪಿಂಡವನ್ನು ಮಾರಿಯಾದರೂ ಮದುವೆಯಾಗುವ ಅನಿವಾರ್ಯತೆ ನಮ್ಮ ಹೆಣ್ಣುಗಳಿಗೇಕೆ ಬಂದಿದೆ? ಕಾಲು ಹೋದದ್ದಕ್ಕೆ ಜೀವವನ್ನೇ ಕಳೆವ ಕ್ರೌರ್ಯ ನಮ್ಮ ತಂದೆ–ತಾಯಿಗಳಿಗೇಕೆ? ಈ ಎಲ್ಲ ಪ್ರಶ್ನೆಗಳಿಗೂ ಉತ್ತರವಿದೆ, ಪರಿಹಾರವಿದೆ. ಅದು ಹೊಸತಲ್ಲ, ಹೇಳುತ್ತಲೇ ಬಂದಿರುವುದು—ಸ್ತ್ರೀ ಶಿಕ್ಷಣ, ಸ್ತ್ರೀ ಜಾಗೃತಿ. ಎಲ್ಲಿಯವರೆಗೂ ನಾವು ಮದುವೆಯನ್ನು ಆರ್ಥಿಕ ಅವಲಂಬನೆಗಾಗಿ ನಂಬಿ, ನಮ್ಮೆಲ್ಲ ಭವಿಷ್ಯವನ್ನು ತಾಳಿಗೆ ತೂಗು ಹಾಕಲು ಹೊರಡುತ್ತೇವೋ ಅಲ್ಲಿಯವರೆಗೂ ವಿವಾಹ ಕೊಟ್ಟು–ಕೊಳ್ಳುವ ವ್ಯಾಪಾರವಾಗುವುದೇ ಹೊರತು, ಪ್ರೀತಿಯ ಸಾಂಗತ್ಯವಾಗಲಾರದು.

ವಿಶ್ವವಿದ್ಯಾಲಯಗಳಲ್ಲಿ ಮಹಿಳಾ ಅಧ್ಯಯನ ಸಂಶೋಧನೆಯ ವಿಷಯವಾಗಿ ಉಳಿದರೆ ಸಾಲದು, ವಿಚಾರಗಳು ರೂಪುಗೊಳ್ಳುವ ಶಾಲಾದಿನಗಳಲ್ಲಿ, ಹದಿವಯಸ್ಸಿನ ಕಾಲೇಜು ಹಂತದಲ್ಲಿ ಮಹಿಳಾ ವಿಚಾರಗಳು ಪಠ್ಯವಾಗಿ, ಈ ವಿಷಯದ ಬಗ್ಗೆ ಯುವಕ–ಯುವತಿಯರು ಗಮನ ಕೊಡುವಂತಹ ಕಾರ್ಯಕ್ರಮಗಳನ್ನು ಯೋಜಿಸಬೇಕಿವೆ.

—ನೇಮಿಚಂದ್ರ

---

ಅಜ್ಜಿಯ ಕತೆ

11ನೇ ಪುಟದಿಂದ

ಸಿತು. ಇಷ್ಟು ಹೊತ್ತೂ ಆ ರಾಜಕುಮಾರಿಯ ಕತೆಯೊಳಗೆ ತಾನೇ ರಾಜಕುಮಾರಿ ಎಂಬಂತೆ ತನ್ನನ್ನು ಒಳಗಾಗಿಸಿಕೊಂಡು ಆ ಪಾತ್ರಕ್ಕೆ ಜೀವ ತುಂಬಿದ ಅಜ್ಜಿ ಒಮ್ಮೆಗೇ ಮಾತಿನ ಹಂಗು ತನಗೇಕೆ....? ಎಂದು ಮೌನವಾಗಿಬಿಟ್ಟಿತ್ತು. ಈ ಪುರಾತನ ಅಜ್ಜಿಯ ಮಿದುಳೊಳಗೆ ಎಷ್ಟೆಲ್ಲ ರಾಜಕುಮಾರಿಯರು ಪ್ರಿಯತಮನ ಬರವಿಗಾಗಿ ಕಾಯುತ್ತಾ....ಕಾಯುತ್ತಾ....ಕಬ್ಬಿಣದ ಕೋಟೆಯಲ್ಲಿ ಬಂಧಿತರಾಗಿರಬಹುದು...ಎಷ್ಟೆಲ್ಲ ರಾಕ್ಷಸರು ಎಷ್ಟೆಲ್ಲ ಹುಡುಗಿಯರನ್ನು ಕದ್ದೊಯ್ದು ಬಂಧಿಸಿ ಚಿತ್ರಹಿಂಸೆ ನೀಡುತ್ತಿರಬಹುದು, ಎಂಬುದನ್ನು ನೆನೆದು ಒಂದುಕ್ಷಣ ಮೈ ಜುಮ್ಮೆಂದಿತು. ಹನ್ನೊಂದಕ್ಕೆ ಮದುವೆಯಾಗಿ ಹನ್ನೆರಡಕ್ಕೆ ಗಂಡಸತ್ತು....ತಿಂಗಳ ತಿಂಗಳ ಗುಲ್‌ಮೊಹರು ವ್ಯರ್ಥವಾಗುತ್ತಾ ಅಜ್ಜಿ ಈ ಕತೆಯ ರಾಜಕುಮಾರಿಯೇನಾ ಎಂಬ ಗುಮಾನಿ ಮೆದುಳೊಳಗೆ ಪ್ರವೇಶಿಸಿತು..ನನ್ನೊಳಗಿನ ಕತೆಗಾತಿ ಸೆನ್ನು ಹಾಳೆಯ ಹಸಿವಿನಲ್ಲಿ ಅಳುತ್ತಿದ್ದ.... ●



# ಮುಸ್ಲಿಂ ಹೆಣ್ಣಿನ ನೋವಿನ ಚಿತ್ರಣ

○ ಪ್ರೀತಿ

ಸಾಹಿತ್ಯ ಅನ್ನುವುದು ಪದಪದಗಳ ನಡುವಿನ ದೊಂಬರಾಟವಲ್ಲ—ಬದಲಿಗೆ ಬದುಕಿನಂಗಳದ ನಾನಾ ಸಿಹಿ–ಕಹಿ ಅನುಭವಗಳ ಚಿತ್ರಣ. ಇಲ್ಲಿ ಕತೆಗಾರನ ಭಾವಗಳು, ಭಾಷೆಯ ರೂಪುತಳೆದು ತೊಟ್ಟುತೊಟ್ಟಾಗಿ ಕಾಗದದ ಮೇಲೆ ಜಾರಬೇಕು. ಒಂದು ಉತ್ತಮ ಸಾಹಿತ್ಯಕ್ಕೆ ಹೀಗಾಗಿ ಎರಡು ಅಗತ್ಯಗಳಿರುತ್ತವೆ-ಒಂದು, ಶ್ರೀಮಂತವಾದ ಜೀವನಾನುಭವ—ಮತ್ತೊಂದು ಅವನ್ನು ದುಡಿಸಿಕೊಳ್ಳುವ, ಸಮರ್ಥವಾಗಿ ಭಾಷೆಯ ಚೌಕಟ್ಟಿನಲ್ಲಿರಿಸುವ ಚಾಕಚಕ್ಯತೆ. ಪ್ರಸ್ತುತ ನನ್ನ ಮುಂದಿನ ಎರಡು ಪುಸ್ತಕಗಳು ಅನೇಕ ವಿಧದಿಂದ ಸಾಮ್ಯತೆ ಪಡೆದಿದ್ದರೂ ಅನುಭವ ಹೇಗೆ ಹಾಳೆಯ ಮೇಲೆ ಕುಸುರಿಯಾಗಿದೆ ಎಂಬಲ್ಲಿ ದೊಡ್ಡ ವ್ಯತ್ಯಾಸವಿದೆ.

ಯಾದರೆ—ಇಲ್ಲಿ ವರದಕ್ಷಿಣೆ ಕಾಟದಿಂದ ಮದುವೆಯ ಬಗ್ಗೆ ಕನವರಿಸಲೂ ಹೆದರುವ ಹೆಣ್ಣುಗಳು ಒಂದು ಕಡೆ" ಈ ಹೋರಾಟದ ಕೆನವಾಸಿನಲ್ಲಿ ಫಕೀರರ ಕಾದಂಬರಿ ಜೀವ ಪಡೆದುಕೊಳ್ಳುತ್ತದೆ. ಕಾದಂಬರಿಕಾರ ಪ್ರತಿಯೊಂದು ಪದವನ್ನು ಬಳಸುವಾಗಲೂ ಸತ್ತು ಸತ್ತು ಹುಟ್ಟುತ್ತಾನಂತೆ. ಬಹುಶಃ ಮುಹಮ್ಮದ್‌ರ ಕಾದಂಬರಿಯನ್ನು ಓದುವಾಗ ಮತ್ತೆ ಮತ್ತೆ ನೆನಪಾಗುತ್ತಿದ್ದ ನುಡಿಗಟ್ಟೆಂದರೆ ಇದೇ....

"ಮುಮ್ಮಟ್ಟಿಯ ಸೈಕಲಿನ ಮೇಲೆ ಕಾಗೆಗಳು ಸವಾರಿ ಮಾಡುತ್ತಿದ್ದವು. ಬುಟ್ಟಿಯನ್ನು ಮುಚ್ಚಿಟ್ಟ ಗೋಣಿಯ ತಾಟನ್ನು ಎಳೆದುಹಾಕುವ ಪ್ರಯತ್ನ ಮಾಡುತ್ತಿದ್ದವು.

'ಸರಕುಗಳು'—ಫಕೀರ್ ಮುಹಮ್ಮದ್ ಕಟ್ಪಾಡಿ, ಪುಟಗಳು 146 ಬೆಲೆ ರೂ. 15/-
'ಚಪ್ಪಲಿಗಳು'—ಸಾರಾ ಅಬೂಬಕ್ಕರ್, ಪುಟಗಳು 134 ಬೆಲೆ ರೂ. 15/-
ಪ್ರಕಟಣೆ : ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು.

ಮೂಲತಃ ಅಲ್ಪಸಂಖ್ಯಾತ ಜನಾಂಗದಿಂದ ಬಂದು, ಆ ಜನಾಂಗದ, ಅದರಲ್ಲೂ ಆ ಜನಾಂಗದ ಹೆಣ್ಣುಮಕ್ಕಳ ನೋವುಗಳನ್ನು ಪ್ರತಿಫಲಿಸುವುದು ಎರಡೂ ಕೃತಿಗಳ ಮುಖ್ಯ ಕಾಳಜಿಯಾಗುತ್ತದೆ. ಗೆಳೆಯ ಫಕೀರ್ ಅವರು, 'ವ್ಯವಸ್ಥೆಯ ಸೂತ್ರದಲ್ಲಿ ಬಂಧಿಯಾದ' ಜನರ ಕತೆ ಹೇಳ ಹೊರಟರೂ ನಮ್ಮ ಎದೆಗೆ ಹತ್ತಿರವಾಗಿ ಬಿಡುವುದು, ಇಲ್ಲಿನ 'ಸರಕು'ಗಳಾಗಿ ಮಾತ್ರ ಉಳಿದುಬಿಡುವ ಹೆಣ್ಣುಗಳ ನೋವುಗಳನ್ನು ಸಮರ್ಥವಾಗಿ ಬಿಡಿಸುವುದರಿಂದಲೆ.

"ತಮ್ಮ ನಾಡಿನಲ್ಲಿ 'ಮೆಹರ್' ನೀಡಲಾಗದೆ ಮದುವೆಗಾಗಿ ಕಾತರಿಸುವ ಅರಬಿ ಗಂಡುಗಳು ಒಂದು ಕಡೆ

ಮುಮ್ಮಟ್ಟಿ ಹತ್ತಿರವಾದಂತೆ ಅವೆಲ್ಲ ಪುರ್ರನೆ ಹಾರಿ ಹೋದವು. ಮುಮ್ಮಟ್ಟಿಯ ತಲೆಯತುಂಬ ನಫೀಸಳನ್ನು ಈ ರಾಕ್ಷಸನಿಂದ ಪಾರುಮಾಡುವುದು ಸಾಧ್ಯವೇ ಎಂಬ ಪ್ರಶ್ನೆಯೇ ತುಂಬಿತ್ತು...."

—ಎನ್ನುವಲ್ಲಿ ಎಷ್ಟು ಸಮರ್ಥವಾಗಿ ಪರಿಸ್ಥಿತಿಯನ್ನು ಬಿಂಬಿಸುವ ಯತ್ನ ಅಡಗಿದೆ ಎಂದು ಓದುಗನೇ ತೀವ್ರವಾಗಿ ಅಚ್ಚರಿಗೊಳ್ಳಬೇಕು....ಪ್ರಾಯದ ತಂಗಿಯನ್ನು ಕುಕ್ಕಿತಿನ್ನುವ ಬಡತನ, ವರ್ಷಾವರ್ಷ ಬಂದು ಇಲ್ಲಿನ ಬಡ ಹುಡುಗಿಯರನ್ನ 'ನಿಕಾಹ್' ಆಗಿ ಚಪಲ ತೀರಿಸಿಕೊಳ್ಳುವ ಮುದುಕರಿಂದ ಪಾರುಮಾಡುವುದು ಹೇಗೆ ಅನ್ನುವಾಗ—'ಬುಟ್ಟಿಯನ್ನ ಮುತ್ತಿಗೆ ಹಾಕಿರುವ ಕಾಗೆ

ಗಳ ಚಿತ್ರ, ಕಣ್ಣೊಳಗೇ ಇಳಿದು ಬಿಡುತ್ತದೆ. ಇಂಥ ಪ್ರತಿಮೆಗಳು ಎಷ್ಟು ಅನನ್ಯವಾಗಿ ಮೂಡಿವೆ ಅಂದರೆ ಬರೆಯುವ ಹೊತ್ತಿನಲ್ಲಿ ಕತೆಗಾರನಿಗಾದರೂ ಇದರ 'effect' ಬಗ್ಗೆ ಅರಿವಿತ್ತೋ ಎಂಬ ಸಂದೇಹ ಮೂಡುತ್ತದೆ. ಹೀಗಾಗಿ ಪ್ರತಿಮೆಗಳು ಎಲ್ಲೂ ತುರುಕಲ್ಪಡದೆ ಹೇರಲ್ಪಡದೆ ಕೃತಿಯ ಅವಿಭಾಜಕ ಅಂಗಗಳಾಗಿ ಉಳಿದು ಬಿಡುತ್ತವೆ.

ಉತ್ತರಾರ್ಧದ ಉದ್ದಕ್ಕೂ 'ಕುಟ್ಟಿಚಿರಾ'ದ ಕಡಲ ತೀರದ ಮುಸ್ಲಿಂ ಬದುಕನ್ನ ದಾಖಲಿಸುತ್ತ ಹೊರಡುವ ಕಾದಂಬರಿ ಪೂರ್ವಾರ್ಧದ ಕಡೆಯ ಪುಟಗಳಲ್ಲಿ ಮಿತಿ ಮೀರಿದ ಓಟ ಪಡೆದುಕೊಳ್ಳುತ್ತದೆ. ಸಲೀಮ—ನಫೀಸರಲ್ಲಿ ಬೆಳೆಯತೊಡಗುವ ಮುಗ್ಧ ಪ್ರಣಯ ಮುಂದುವರೆಯಲಾಗದೆ, ಸಲೀಮ ಬೇರೆ ಹುಡುಗಿಯನ್ನು ಮದುವೆಯಾಗಿ—ಅವಳಿಗೆ 'ತಲಾಕ್' ಕೊಟ್ಟು—ನಫೀಸಳಿಗೆ ಅರಬ್ಬಿಯೊಡನೆ 'ನಿಕಾಹ್' ಆಗುವ ಹೊತ್ತಿನಲ್ಲಿ ಅವನೇ ಅವಳಿಗೆ ತಂದೆಯಾದವ ಎಂದು ತಿಳಿದುಬರುವುದೂ ಕಡೆಗೆ ಸಲೀಮ ಮತ್ತೆ ನಫೀಸಳನ್ನು ಮದುವೆಯಾಗುವುದಾಗಿ ಕೇಳುವುದು ಎಲ್ಲವೂ ಕಡೆಕಡೆಯ ಪುಟಗಳಲ್ಲಿ ತುರುಕಲ್ಪಟ್ಟಿವೆ. ಕಾದಂಬರಿಕಾರನಿಗೆ ಕಾದಂಬರಿ ಮುಗಿಸಲು ಇಷ್ಟೊಂದು ಅವಸರವಿತ್ತ ?! ಎಂದು ಓದಿ ಕೆಳಗಿಟ್ಟಾಗ ನನಗೇ ಕೋಪ ಬರುತಿತ್ತು !!

....ವಿಶಾಲವಾದ ಮುಸ್ಲಿಂ ಬದುಕಿನ ಚಿತ್ರಣವಿರುವ ಕಾದಂಬರಿ ಬೆಳೆದಿರುವ ಹರಹು ಸಾಲದು. ದುಬೈನಲ್ಲಿ ಇರುವ ಗಂಡನಿಗಾಗಿ ತಪಿಸುವ ಜುಬೇದ, ಪ್ರತಿವರ್ಷ ಒಬ್ಬೊಬ್ಬ ಅರಬಿಯನ್ನು ಮದುವೆಯಾಗುವ ಹಫ್ಸಾ, ಜುಲೇಖಾ—ಅಥವಾ ಅಪ್ಪನ ಆಜ್ಞೆಗೆ ಮಣಿದು ಗಂಡನನ್ನ ಬಿಟ್ಟುಬಿಡುವ ಆಯೇಷಾ, ('ತಲಾಖ್' ನೀಡುವ ಹೊತ್ತಿನಲ್ಲಿ ಆಯೇಷಾಳ ಒಂದು ಮಿಂಚೂ ಕಾಣಸಿಗುವುದಿಲ್ಲ. ಒಂದು ಅತ್ಯಂತ ಪ್ರಭಾವಶಾಲಿ ಆಗಿಬಿಡಬಹುದಾಗಿದ್ದ ಪಾತ್ರಕ್ಕೆ ನ್ಯಾಯ ಸಿಗದೇ ಸೊರಗಿದೆ). ಯಾರ ನೋವೂ ಎಲ್ಲೂ ಮುಖ್ಯವಾಗದೆ (ಎಲ್ಲೂ ವೈಯಕ್ತಿಕ ನೋವು ಮುಖ್ಯವಾಗದೆ ಒಂದು ಗುಂಪಿನ ನೋವು ಮಾತ್ರ ಮುಖ್ಯವಾಗುತ್ತದೆ) ಬರೇ ಉಲ್ಲೇಖಗಳಾಗಿ ಉಳಿದುಬಿಡುತ್ತದೆ ಎನ್ನುವಲ್ಲಿ ಕಾದಂಬರಿಯ ಮುಖ್ಯಮಿತಿ ಅಡಗಿದೆ.

ಎಲ್ಲೂ ಆಶಾವಾದಿಯೂ ಆಗದ ತೀರ ನಿರಾಶಾವಾದಿಯೂ ಆಗದ ಕತೆಗಾರ ವಾಸ್ತವವಾದಿ, ತೀರವಾಸ್ತವವಾದಿ. ಹೆಗಲ ಮೇಲೆ ಕೈಯ್ಯಿಟ್ಟು ಮಾತನಾಡುವ ಗೆಳೆಯನಂಥ ಭಾಷೆಯ ಫಕೀರ್ ಓದುಗರಲ್ಲಿ ನೋವುಗಳನ್ನು ಬಿಚ್ಚಿಡುತ್ತಾರೆ.

"ಮಳೆಯಿಂದ ತೊಯ್ದು ಉದ್ದುದ್ದ ತೆಂಗಿನ ಮರದ ಸೋಗೆಗಳು ಬೆಳುದಿಂಗಳ ಬಂಗಾರವರ್ಣದ ಬೆಳಕನ್ನು ಪ್ರತಿಫಲಿಸುತ್ತಾ ಅಲ್ಲೊಂದು ಸುಂದರ ದೃಶ್ಯವನ್ನು ಸೃಷ್ಟಿಸಿತ್ತು. ಮರಳುನೆಲ ಕೂಡ ತನ್ನ ಮುದ್ರೆ ಒತ್ತಿ ಬಿಡುವ ಚಂದ್ರನ ಮೇಲೆ ಒಂದು ಕ್ಷಣ ಅಸೂಯೆಯಾಯಿತು ; ಸಲೀಮನಿಗೆ" ಎಂಬಂಥ ಸಾಲುಗಳನ್ನು ನೀಡಿದ ಕಟ್ಟಾಡಿ ಒಳ್ಳೆ ಕತೆಗಾರ ಎಂಬುವುದರಲ್ಲಿ ಎರಡು ಮಾತಿರುವುದಿಲ್ಲ. ಮುನ್ನುಡಿಯಲ್ಲಿ 'ಬೊಳುವಾರು' ಹೇಳುವ ಹಾಗೆ....'ಈ ಕಾದಂಬರಿ ಮುಂದಿನ ನೂರು ಕಾದಂಬರಿಗಳಿಗೆ ಮೊದಲ ಹೆಜ್ಜೆಯಾಗಲಿ" ಎಂದು ಹರಸುವುದು ನಮ್ಮ ನಿಮ್ಮಂಥ ಸಹೃದಯರ ಕರ್ತವ್ಯ, ಹರಸೋಣವೆ....?

## 'ಚಪ್ಪಲಿಗಳು'—ಸಾರಾ ಅಬೂಬಕ್ಕರ್

'ಅಲ್ಪಸಂಖ್ಯಾತ ಜನಾಂಗವೊಂದರ ಮುಖ್ಯ ಹೆಣ್ಣುದನಿ' ಎಂದು ಈಗಾಗಲೆ ಸಾಹಿತ್ಯ ಕ್ಷೇತ್ರದಲ್ಲಿ ಸಾಕಷ್ಟು ಭರವಸೆ ಹುಟ್ಟಿಸಿರುವ ಲೇಖಕಿ ಸಾರಾ ಅವರ ಮೊದಲ ಕಥಾ ಸಂಕಲನ. 'ಲೇಖಕಿಯ ಮಾತು'ವಿನಲ್ಲಿ ಅವರು ಹೇಳುವ ಹಾಗೆ ಈ ಸಂಕಲನದ ಕತೆಗಳು ಹೆಚ್ಚು ಪತ್ರಿಕೆಗಳ 'ಒತ್ತಾಯ'ದಿಂದ ಬರೆದಂಥವು.

ಗಂಡನನ್ನು ದುಬೈಗೆ ಕಳಿಸಿ ವಿರಹದೊಳಗೂ, ಮನೆಯೊಳಗಿನ ಕಟ್ಟುಪಾಡಿಗೂ ಬಲಿಯಾಗುವ 'ಚಪ್ಪಲಿಗಳು' ಕತೆಯ ನಾಯಕಿಯಿಂದ ಹಿಡಿದು, ಅಸ್ಪೃಶ್ಯತೆಯ ರೋಗ ಮುಂದುವರೆದ ಪಟ್ಟಣಗಳಲ್ಲೂ ಉಕ್ಕಿತೆನ್ನುವ ಕೀಳರಿಮೆಯ ಲಲಿತಳವರೆಗೆ ವಸ್ತುವಿನ ವೈವಿಧ್ಯವಿದ್ದರೂ ಎಲ್ಲೂ ಸಂಕಲನದ ಯಾವೊಂದು ಕತೆಯೂ ಆತ್ಮೀಯವಾಗಿ ಓದುಗನನ್ನು ತಟ್ಟುವುದಿಲ್ಲ. ಯಾವುದೋ ಹಂತದಲ್ಲಿ ಎಲ್ಲ ಕತೆಗಳೂ 'impersonal' ವರದಿಗಳಾಗಿ ಬಿಡುತ್ತವೇ ಹೊರತು ನೋವು ಭಾಷೆಯ ಅಂಚೊಳಗೆ ಪದರು ಪದರಾಗಿ ಇಳಿಯುವುದಿಲ್ಲ.

ವಸ್ತು ಎಷ್ಟೇ ಗಾಢವಾದದ್ದಾಗಿರಲಿ—ಭಾಷೆ ಮತ್ತು

ಶೈಲಿಯಲ್ಲಿದೆ ಹೇಗೆ ಸೊರಗಿ ಪೇಲವವಾಗಿ, ಸತ್ತೇ ಹೋಗುತ್ತದೆ ಎನ್ನುವುದಕ್ಕೆ ಉತ್ತಮ ಉದಾಹರಣೆಗಳಾಗಬಲ್ಲವು; ಸಂಕಲನದ ಎಲ್ಲ ಕತೆಗಳೂ ಹೆಚ್ಚಿನ ಕತೆಗಳಲ್ಲಿ ಪ್ರತಿಭಟನೆ ಕಹಿಯಾದ ವಿಡಂಬನೆ ಇಲ್ಲವೇ ಸ್ಲೋಗನ್ನುಗಳಾಗಿ ಬಿಡುತ್ತವೆ. ಹೆಚ್ಚಿನ ಮಾತುಗಳು ಭಾಷಣಗಳಾಗಿ ಉಳಿದು ಓದುಗನ ಎದೆಯನ್ನು ತಟ್ಟುವುದಿಲ್ಲ.

ಹೀಗಿದ್ದರೂ ಒಬ್ಬ ಯಶಸ್ವಿ ಲೇಖಕ/ಲೇಖಕಿಗೆ ಪ್ರಮುಖವಾಗಿ ಇರಬೇಕಾದದ್ದು—ಸುತ್ತಮುತ್ತಿನ ನೋವುಗಳಿಗೆ ಸ್ಪಂದಿಸಿಬಿಡುವ ಹೃದಯ ಮತ್ತು ಮಾನವೀಯತೆ ಇವೆರಡೂ ಸಾರಾ ಅವರಲ್ಲಿ ಧಾರಾಳವಾಗಿವೆ. 'ಸಾರಾ' ಮುಖ್ಯವಾಗಿ ಕತೆಗಾರ್ತಿಯಲ್ಲಿ ಪರಿಸರದ ನೋವಿಗೆ ಸ್ಪಂದಿಸುವ ಮಾನವಜೀವಿ. ಅಂತಲೇ ಅವರ ಕತೆಗಳು ಸಾಹಿತ್ಯದ ದೃಷ್ಟಿಯಿಂದ ಮುಖ್ಯವಾಗದಿದ್ದರೂ ದಿನದಿನವೂ ಬಿಗಿಯಾಗುವ ಕಪ್ಪುಕತ್ತಲೆಯೊಳಗೆ ಸಾಯುತ್ತಾ ಬದುಕುತ್ತಿರುವ ಮುಸ್ಲಿಂ ಮಹಿಳೆಯ ದಿನಚರಿಯಾಗಿ ನಮಗೆ ಮುಖ್ಯವಾಗುತ್ತದೆ.

ಎಂದಿನಂತೆ ಕಮಲೇಶರ ಮುಖಚಿತ್ರ, ನವಕರ್ನಾಟಕದ ಉತ್ತಮ ಕಾಗದ ಅತ್ಯುತ್ತಮ ಮುದ್ರಣ ಕಣ್ಮನ ಸೆಳೆಯುತ್ತದೆ. ●



# ಹೆರುವ ಸ್ವಾತಂತ್ರ್ಯಕ್ಕಾಗಿ ಚಳುವಳಿ

ಏಪ್ರಿಲ್ 6, 1989ರಂದು ಅಮೆರಿಕೆಯ ರಾಜಧಾನಿಯೆಡೆಗೆ ಮೂರು ಲಕ್ಷಕ್ಕೂ ಹೆಚ್ಚು ಮಹಿಳಾ ಪ್ರತಿಭಟನಕಾರರು ಸಾಗಿದ್ದರು. ಅವರ ಮುಖ್ಯ ಘೋಷಣೆ ಮಹಿಳೆಯರ ಭವಿಷ್ಯವು ಅವರ ಕೈಯಲ್ಲಿದೆ; ಚರ್ಚ್ ಆಗಲಿ, ದೇಶವಾಗಲಿ ನಿಯಂತ್ರಿಸುವಂತಿಲ್ಲ ಎನ್ನುವುದಾಗಿತ್ತು. ಅಮೆರಿಕದ ಮಹಿಳೆಯರು ಪ್ರಭುತ್ವದ ವಿರುದ್ಧ ಸಾರಿದ ಸಮರವಾಗಿತ್ತು, ಇದು. ಅಧ್ಯಕ್ಷ ಬುಶ್ ಹಾಗೂ ಉಚ್ಚ ನ್ಯಾಯಾಲಯಕ್ಕೆ ಈ ಮಹಿಳೆಯರು ತಮ್ಮ ಸಂದೇಶವನ್ನು ಕಳಿಸಿದ್ದರು. ಮಹಿಳೆಯರಿಗಿದ್ದ ಕಾನೂನು ಸಮ್ಮತ ಗರ್ಭಪಾತ ಸೌಕರ್ಯವನ್ನು ವಿರೋಧಿಸುವ ಮೊಕದ್ದಮೆಯು ಏಪ್ರಿಲ್ 26 ರಂದು ನ್ಯಾಯಾಲಯದಲ್ಲಿ ಬರುವುದಿತ್ತು. ಅದಕ್ಕಾಗಿ ರಾಷ್ಟ್ರಾದ್ಯಂತ ನಡೆದ ಪ್ರತಿಭಟನಾ ಚಳುವಳಿಯಿದು.

1973ರ ವರೆಗೂ ಅಮೆರಿಕದಲ್ಲಿ ಗರ್ಭಪಾತ ಕಾನೂನಿಗೆ ವಿರೋಧವಾಗಿತ್ತು. ಹಣವಿದ್ದ ಮಹಿಳೆಯರಾದರೆ ನೆರೆ ರಾಜ್ಯಗಳಿಗೆ ಹೋಗಿ ಮಾಡಿಸಿಕೊಂಡು ಬರುತ್ತಿದ್ದರು. ಇಲ್ಲವೇ ಕಾನೂನು ವಿರೋಧಿ ಗರ್ಭಪಾತವಾಗಿಯೇ ರಹಸ್ಯವಾಗಿ ಹಣ ಸುರಿದು ಅಲ್ಲಿಯೇ ಮಾಡಿಸಿಕೊಳ್ಳುತ್ತಿದ್ದರು. ಆದರೆ ಅಮೆರಿಕೆಯ ಮಿಲಿಯನ್‌ಗಟ್ಟಲೆ ಮಹಿಳೆಯರಿಗೆ ಗರ್ಭಪಾತವೆನ್ನುವುದು ದುಸ್ವಪ್ನವಾಗಿತ್ತು; ಇಲ್ಲವೇ ಬೇಡದ ಮಗುವಿಗೆ ಜನ್ಮ ಕೊಡಬೇಕಿತ್ತು. ರಹಸ್ಯವಾಗಿ ತಾವೇ ಅಪಾಯಕಾರಿ ಸಾಧನಗಳಿಂದ ಮಾಡಿಕೊಳ್ಳುತ್ತಿದ್ದ ಗರ್ಭಪಾತದಿಂದ ಸಾಕಷ್ಟು ಶಕ್ತಿಹೀನರಾಗುತ್ತಿದ್ದರಲ್ಲದೆ, ಸೋಂಕು ಮುಂತಾದ ರೋಗಗಳಿಗೆ ತುತ್ತಾಗಿ ಸಾವಿಗೂ ಸಿದ್ಧರಿರಬೇಕಾಗಿತ್ತು.

ಆದರೆ ಅರವತ್ತರ ಹಾಗೂ ಎಪ್ಪತ್ತರ ದಶಕದಲ್ಲಿ ಅಮೆರಿಕೆಯಲ್ಲಿ ನಡೆದ ಪ್ರಬಲ ಮಹಿಳಾ ಚಳುವಳಿಯ ಪರಿಣಾಮವಾಗಿ ಅಲ್ಲಿನ ಮಹಿಳೆಯರಿಗೂ ಗರ್ಭಪಾತದ ಆಯ್ಕೆಯ ಸೌಲಭ್ಯ ದೊರೆಯಿತು. 1973ರಲ್ಲಿ ಇಲ್ಲಿನ ಮಹಿಳೆಯರಿಗೆ ದೊರಕಿದ 'ಗರ್ಭಪಾತದ ಆಯ್ಕೆ'ಯ ವಿಜಯ ಚಾರಿತ್ರಿಕವಾಗಿ ಮಹತ್ವದ್ದು. ಉಚ್ಚ ನ್ಯಾಯಾಲಯವು ಪ್ರಸಿದ್ಧ ರೋ ವಿರುದ್ಧ ವೇಡ್ ಮೊಕದ್ದಮೆಯಲ್ಲಿ ಮಹಿಳೆಯರಿಗೂ ಖಾಸಗಿಯಾದ ಸಂವಿಧಾನಾತ್ಮಕ ಹಕ್ಕಾಗಿ ಗರ್ಭಪಾತದ ಹಕ್ಕಿನ ಪರವಾಗಿ ತೀರ್ಪು ಕೊಟ್ಟಿತು. ಆದರೆ ಈ ಚಾರಿತ್ರಿಕ ನಿರ್ಣಯದ ನಂತರ ಹದಿನಾರು ವರ್ಷಗಳಾದ ಮೇಲೆ ಮತ್ತೊಮ್ಮೆ ಉಚ್ಚ ನ್ಯಾಯಾಲಯದ ಮುಂದೆ ವೆಬ್‌ಸ್ಟರ್ ವಿರುದ್ಧ ಜೀವೋತ್ಪತ್ತಿ ಆರೋಗ್ಯ ಸೇವೆಯ ಮೊಕದ್ದಮೆಯು ಗರ್ಭಪಾತವನ್ನು ವಿರೋಧಿಸಲು ಬಂದಿದೆ. ಇದೇ ನಿಲುವನ್ನು ಪ್ರತಿನಿಧಿಸಿದ ರೀಗನ್–ಬುಷ್ ಆಡಳಿತ ಮಹಿಳೆಯರ ಸ್ವಾತಂತ್ರ್ಯಕ್ಕೆ ಗಂಡಾಂತರಕಾರಿಯಾಗಿ ಪರಿಣಮಿಸಿದೆ.

ವೆಬ್‌ಸ್ಟರ್ ಮೊಕದ್ದಮೆಯ ಮುಖ್ಯ ಅಂಶವಿರುವುದು 1986 ಮಿಸೌರಿ ರಾಜ್ಯದ ಗರ್ಭಪಾತ ವಿರೋಧಿ ಕಾನೂನನ್ನು ಕುರಿತಾಗಿ. ಇದರ ಪ್ರಕಾರ ಗರ್ಭಧಾರಣೆಯ ಪ್ರಾಥಮಿಕ ಹಂತದಲ್ಲೇ ಜೀವದ ಉಗಮವಾಗುವುದರಿಂದ ಇನ್ನೂ ಹುಟ್ಟದಿರುವ ಜೀವಕ್ಕೂ ಬದುಕುವ ಹಕ್ಕು ಇದೆ. ಇದು ಮೂಲತಃ ಧಾರ್ಮಿಕ ನಂಬಿಕೆಯೂ ಆಗಿರುವುದರಿಂದ ಭ್ರೂಣವನ್ನು ಮನುಷ್ಯ ಜೀವಿಯಂತಲೇ ಪರಿಗಣಿಸಲಾಗಿದೆ. ಆದ್ದರಿಂದ ಅಲ್ಲಿಯ ಉಚ್ಚ ನ್ಯಾಯಾಲಯ ಮಿಸೌರಿ ಕಾನೂನನ್ನು ಎತ್ತಿಹಿಡಿದದ್ದೇ ಆದರೆ ಸರ್ಕಾರದಿಂದ ಅನುದಾನ ಪಡೆಯುವ ಆಸ್ಪತ್ರೆಗಳಲ್ಲಿ ಗರ್ಭಪಾತ ಮಾಡುವುದನ್ನು ನಿಲ್ಲಿಸಬೇಕಾಗುತ್ತದೆ. ಅದರ ಬಗ್ಗೆ ಮಾಹಿತಿ ಕೊಡುವುದನ್ನು, ಕೊಡುವವರನ್ನು ಶಿಕ್ಷಿಸಲಾಗುತ್ತದೆ.

ವೆಬ್‌ಸ್ಟರ್ ಮೊಕದ್ದಮೆಯ ಅತ್ಯಂತ ದೊಡ್ಡ ಪೆಟ್ಟೆಂದರೆ, ರೋ ಮೊಕದ್ದಮೆಯಲ್ಲಿನ ನಿರ್ಣಯವನ್ನು ತಿರುವು ಮುರುವು ಮಾಡುವುದರಿಂದ ಮಹಿಳೆಯರು ಬೇಡವಾದ ತಮ್ಮ ಗರ್ಭವನ್ನು ತೆಗೆಸಿಕೊಳ್ಳಬಹುದಾದ ಸ್ವಾತಂತ್ರ್ಯದಿಂದ ವಂಚಿತರನ್ನಾಗಿ ಮಾಡುವುದು. ಅದನ್ನು ಮಾಡದಿದ್ದರೂ ಗರ್ಭಪಾತಕ್ಕೆ ಸಂಬಂಧಪಟ್ಟಂತೆ

ಅತ್ಯಂತ ಕಠಿಣವಾದ ನಿರ್ಬಂಧಗಳನ್ನು ವಿಧಿಸುವ ಸಾಧ್ಯತೆಯಿದೆ. ಇದರಿಂದಾಗಿ ಅತ್ಯಂತ ಚಿಕ್ಕ ವಯಸ್ಸಿನಲ್ಲಿ ಗರ್ಭಿಣಿಯಾದವರಿಗೆ ಹಾಗೂ ಪರರಾಜ್ಯಗಳಿಗೆ ಹೋಗಿ ಗರ್ಭಪಾತ ಮಾಡಿಸಿಕೊಳ್ಳಲಾಗದ ಬಡ ಮಹಿಳೆಯರಿಗೆ ತುಂಬಾ ಕಷ್ಟವಾಗುತ್ತದೆ.

ಅಧ್ಯಕ್ಷ ಬುಷ್ ಮತ್ತು ಅಮೆರಿಕೆಯ ಮತಾಂಧ ಕ್ರಿಶ್ಚಿಯನ್ ಸಮೂಹ ಗರ್ಭಪಾತವನ್ನು ವಿರೋಧಿಸುವ ಪ್ರಮುಖ ಶಕ್ತಿಗಳಾಗಿ ಗರ್ಭಪಾತದ ಹಕ್ಕಿನ ವಿರುದ್ಧ ದೊಡ್ಡ ಸಮರವನ್ನೇ ಸಾರಿದ್ದಾರೆ. ಇದುವರೆಗೂ ಅಮೆರಿಕದಲ್ಲಿ 1.6 ಮಿಲಿಯನ್ ಮಹಿಳೆಯರು ಪ್ರತಿ ವರ್ಷ ಗರ್ಭಪಾತವನ್ನು ಮಾಡಿಸಿಕೊಳ್ಳುತ್ತಿದ್ದರು. ಜನ ಸಮೀಕ್ಷೆಯ ಪ್ರಕಾರ ಶೇಕಡ 70ರಷ್ಟು ಮಂದಿ ಗರ್ಭಪಾತದ ನಿರ್ಧಾರವನ್ನು ಮಹಿಳೆಗೇ ಬಿಡುವ ಸ್ವಾತಂತ್ರ್ಯವನ್ನು ಅಭಿಪ್ರಾಯ ಪಡುತ್ತದೆ. ಆದರೂ ಇವೆಲ್ಲವನ್ನೂ ಲೆಕ್ಕಿಸದೆ ಗರ್ಭಪಾತದ ವಿರುದ್ಧ ಒಂದು ಬೃಹತ್ ಕುತಂತ್ರದ ಯೋಜನೆಯನ್ನೇ ರಚಿಸಲಾಗಿದೆ. ಈ ಗರ್ಭಪಾತ ವಿರೋಧಿ ಚಳುವಳಯ ಮುಂಚೂಣಿಯಲ್ಲಿರುವವರು ಗರ್ಭಪಾತ ಮಾಡಿಸಿಕೊಳ್ಳುವವರಿಗೆ ಮತ್ತು ಮಾಡುವವರಿಗೆ ಒಂದು ಭಯಂಕರ ಸನ್ನಿವೇಶವನ್ನೇ ಸೃಷ್ಟಿಸಿದ್ದಾರೆ. ಗರ್ಭಪಾತ ಚಿಕಿತ್ಸಾಲಯಗಳ ಮೇಲೆ ದಾಳಿ ನಡೆಸುವುದು, ಅವರ ವಿರುದ್ಧ ಮೊಕದ್ದಮೆಗಳನ್ನು ಹೂಡುವುದು ಮತ್ತು ಪತ್ರಿಕೆಗಳ ಮೂಲಕ ಅಪಪ್ರಚಾರ ನಡೆಸುವುದು ಇವೇ ಮುಂತಾದ ಕುತಂತ್ರಗಳ ಮೂಲಕ ಬದುಕ ಅಸಹನೀಯವೆನ್ನಿಸುವಂತೆ ಮಾಡುವುದೇ ಅವರ ಮುಖ್ಯ ಯೋಜನೆ. ಇಷ್ಟೇ ಅಲ್ಲ,ಗರ್ಭಪಾತ ಚಿಕಿತ್ಸಾಲಯಗಳ ಬಳಿ ಪಿಕೆಟಿಂಗ್ ನಡೆಸುವುದು, ಈ ಪ್ರತಿಭಟನಕಾರರು ತಾವೇ ಒಂದು ವೃತ್ತವನ್ನು ರಚಿಸಿಕೊಂಡು ಬೈಬಲ್ ಓದುತ್ತಾ, ಅದರ ಮಂತ್ರಗಳನ್ನು ಹಾಡುತ್ತಾ, 'ಉಚ್ಛ ನ್ಯಾಯಾಲಯವೇ, ಸರ್ವಶಕ್ತ ಭಗವಂತನು ನಿಮ್ಮನ್ನು ಗಮನಿಸುತ್ತಿದ್ದಾನೆ' ಎಂದು ಘೋಷಣೆ ಕೂಗುವುದೇ ಮುಂತಾದ ಮಾನಸಿಕ ಒತ್ತಡಗಳನ್ನು ಹೇರುವುದರಲ್ಲಿ ನಿಸ್ಸೀಮರು. ಅತ್ಯಂತ ರೋಚಕವಾದ ಹಾಗೂ ಭೀಕರವಾದ ಭ್ರೂಣದ ಚಿತ್ರವುಳ್ಳ ಭಿತ್ತಿ ಪತ್ರಗಳನ್ನು ಹಿಡಿದುಕೊಂಡು ಪ್ರದರ್ಶನ ನಡೆಸುವುದು ಇವರ ಮತ್ತೊಂದು ಲಕ್ಷಣ. 'ನೈತಿಕ ಜವಾಬ್ದಾರಿ' ಬಳಗದ ನಾಯಕ ಇತ್ತೀಚೆಗೆ ನಡೆದ ಇಂತಹ ಗರ್ಭಪಾತ ವಿರೋಧಿ ಪ್ರದರ್ಶನಕ್ಕೆ 10,000 ಡಾಲರ್ ಹಣವನ್ನು ದೇಣಿಗೆಯಾಗಿ ಕೊಟ್ಟಿದ್ದಾನೆ. ಧಾರ್ಮಿಕ ನಂಬಿಕೆಯನ್ನೇ ಮುಖ್ಯ ಪ್ರೇರಣೆಯಾಗಿ ಉಳ್ಳ ಈ ಚಳುವಳಿಗೆ ಆಳುವ ಪ್ರಭುಗಳ ಕೃಪಾಕಟಾಕ್ಷವೂ ಇದೆ. ಅಧ್ಯಕ್ಷ ಬುಶ್‌ನ ಚುನಾವಣೆಯಾದ ಎರಡು ದಿನಗಳ ನಂತರವಷ್ಟೇ ನ್ಯಾಯಾಂಗ ಇಲಾಖೆ ಮತ್ತು ಅಟಾರ್ನಿ ಜನರಲ್, ಇಬ್ಬರೂ ರೋ ಮೊಕದ್ದಮೆಯ ತೀರ್ಪನ್ನು ತಿರುಗಾಗಿಸುವ ವೆಬ್‌ಸ್ಟರ್ ಮೊಕದ್ದಮೆಯನ್ನು ತಾವೂ ಅನುಮೋದಿಸುವುದಾಗಿ ಘೋಷಿಸಿದರು. ಜನವರಿಯಲ್ಲಿ ನಡೆದ ಗರ್ಭಪಾತ ವಿರೋಧಿ ಚಳುವಳಿಯ ಚಳುವಳಿಗಾರರನ್ನುದ್ದೇಶಿಸಿ ಅಧ್ಯಕ್ಷ ಬುಷ್ ರೋ ಮೊಕದ್ದಮೆಯ ತೀರ್ಪನ್ನು ತಿರುಗು ಮುರುಗಾಗಿಸಲು ಬಯಸುವ ತಮ್ಮ ಅಪೇಕ್ಷೆಯನ್ನು ಅವರ ಮುಂದಿಟ್ಟಿದಲ್ಲದೆ, ತಾನೂ ಮನುಷ್ಯ ಜೀವಿ ಸಂರಕ್ಷಣೆಯನ್ನು ಅನುಮೋದಿಸುವುದಾಗಿ ಭರವಸೆ ಕೊಟ್ಟರು.

ಅಂತೂ ಅಮೆರಿಕೆಯ ಬಹುಸಂಖ್ಯಾತ ಮತಾಂಧ ಜನತೆಯ ಸಂಕುಚಿತ ಚಿಂತನೆಯ ಫಲವಾಗಿ, 5:4ರ ಪ್ರಮಾಣದ ಮತ ಎಣಿಕೆಯಿಂದಾಗಿ 16 ವರ್ಷಗಳಿಂದ ಅಮೆರಿಕದ ಮಹಿಳೆ ಅನುಭವಿಸುತ್ತಿದ್ದ ಗರ್ಭಪಾತ ಸ್ವಾತಂತ್ರ್ಯಕ್ಕೆ ಕೊನೆ ಬಿದ್ದಿತು. ಅಮೆರಿಕದ ಉಚ್ಚ ನ್ಯಾಯಾಲಯ ಈ ಜುಲೈ 3ರಂದು ಗರ್ಭಪಾತ ವಿರೋಧಿ ತೀರ್ಪು ನೀಡಿ ತನ್ನ ಸ್ತ್ರೀವಿರೋಧಿ ನೀತಿಯನ್ನು ಹೆಚ್ಚು ಪ್ರಚುರಪಡಿಸಿದೆ. ಇದಕ್ಕೂ ಮುಂಚೆಯೇ 19ನೆಯ ಶತಮಾನದಲ್ಲಿ ಗರ್ಭಪಾತದ ಸೌಕರ್ಯವನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ಬಳಸಿಕೊಳ್ಳಲಾಗುತ್ತಿತ್ತು. ಮೇಲ್ವರ್ಗದ ಮಹಿಳೆಯರು ಹೆಚ್ಚು ಹೆಚ್ಚು ಮಕ್ಕಳನ್ನು ಹೆರುವಂತೆ ಮಾಡುವ, ಅದರ ಜೊತೆಗೆ, ಬಡವರಾದ, ಕಪ್ಪು ಮಹಿಳೆಯರು ಹಾಗೂ ವಲಸೆ ಬಂದ ಮಹಿಳೆಯರಿಗೆ ಗರ್ಭಧಾರಣೆಯ ಶಕ್ತಿಯನ್ನು ಕುಂಠಿತಗೊಳಿಸುವ ಕುತಂತ್ರವನ್ನು ಆಚರಿಸಲಾಗುತ್ತಿತ್ತು.

ಇದುವರೆಗೂ ನ್ಯಾಯಾಲಯದ ಕಣದಲ್ಲಿದ್ದ ಹೋರಾಟ ಇನ್ನು ಮುಂದೆ ರಾಜಕೀಯವಾಗಿ ಆಗಬೇಕಾಗಿದೆ. ಅಮೆರಿಕದ ಮಹಿಳಾ ಹೋರಾಟವು ಇನ್ನೂ ಹೆಚ್ಚಿನ ಸಂಕಲ್ಪದಿಂದ ದೃಢ ಹೆಜ್ಜೆಗಳನ್ನಿಡಬೇಕಾಗಿದೆ.

ಸಾಧಾರ

—ಗಿರಿಜಾ

ಮಹಿಳಾ ಪ್ರಶ್ನೆಯ ವಿಶ್ಲೇಷಣೆಗೆ

ಮಹಿಳಾ ಚಳುವಳಿಗೆ ಆಸರೆಯಾಗಿ

ಮಹಿಳಾ ಸಮಸ್ಯೆಗಳ ಚರ್ಚೆಗೆ
ವೇದಿಕೆಯಾಗಿ

‘ ಅಚಲ ’
ದ್ವೈಮಾಸಿಕ

ದಯವಿಟ್ಟು ಗಮನಿಸಿ
‘ಅಚಲ’ ದ್ವೈಮಾಸಿಕದ
ಬದಲಾದ ವಿಳಾಸ :

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ
26, 1ನೇ ಮ್ಯೆನ್, ವೈಯಾಳಿ ಕಾವಲ್,
ಬೆಂಗಳೂರು–560 003.

ನಿಮ್ಮ ಸಲಹೆ, ಸೂಚನೆ, ಪತ್ರಗಳನ್ನು
ಮೇಲಿನ ವಿಳಾಸಕ್ಕೆ ಕಳುಹಿಸಿ.

*Reg. No. MAG (5) PRB. DECL 039/85-87*

BOOK-POST/PERIODICALS

To,

If undelivered please return to :
**Jagruthi Mahila Adhyayana Kendra**
26, 1st Main Road, Vyalikaval
Bangalore–560 003